Photo by R. Ramanujan



ಬಹುಮಾನ
ಪಡೆದ ಶೀರ್ಷಿಕೆ

ಆಧಾರದಿಂದ

ಕಳುಹಿಸಿದವರು :
ಶ್ರೀಮತಿ ಲಕ್ಷ್ಮಿ




Remy

# ರೆಮಿ
ತಯಾರಿಕೆಗಳು




529

# ಚಂದಮಾಮ

ಈ ಸಂಚಿಕೆಯಲ್ಲಿ



## ಓದುಗರಲ್ಲಿ ವಿನಂತಿ

ಚಂದಮಾಮದಲ್ಲಿ ಪ್ರಕಟವಾಗುತ್ತಿರುವ ಬೇತಾಳಕಥೆಗಳನ್ನು ನೀವು ಪ್ರತಿ ತಿಂಗಳೂ ಓದುವಿರಲ್ಲವೆ? ಇವುಗಳಲ್ಲಿ ಹೆಚ್ಚಾಗಿ ಕಲ್ಪಿತಕಥೆಗಳಾಗಿವೆ. ಬೇತಾಳ ಕಥೆಯ ರೂಪದಲ್ಲಿ ಹೇಳಲಾಗುವ ಇತರ ಕಥೆಗಳನ್ನೆ ಈ ಶೀರ್ಷಿಕೆಯಿಂದ ಪ್ರಕಟಿಸುತಿದ್ದೇವೆ. ಇದೇ ರೀತಿಯಾಗಿ ಬೇತಾಳಕಥೆಯಾಗಿ ಪ್ರಕಟಿಸಲಾಗುವ ಕಥೆಗಳು ನಿಮಗೆ ಗೊತ್ತಿದ್ದರೆ ನಮಗೆ ಬರೆದು ಕಳುಹಿಸಿರಿ. ಸರಿಯೆನಿಸಿದಲ್ಲಿ, ಅಗತ್ಯವಿದ್ದರೆ ಸಂಸ್ಕರಿಸಿ ಬೇತಾಳಕಥೆಯ ಶೀರ್ಷಿಕೆಯಲ್ಲಿ ಪ್ರಕಟಿಸಲಾಗುವುದು.

—ಸಂಪಾದಕ

"ಚಂದಮಾಮ"

ಈ ತಿಂಗಳಲ್ಲಿ
ಹೊರಡುತ್ತದೆ!



ಸಾರಥಿ ಯವರ

# ಅತಿಶಯ ತಿರುಡನ್

...ತಮಿಳು...

ನಿರ್ದೇಶನ... ಪಿ. ಪುಲ್ಲಯ್ಯ B.A

ಸ್ಟುಡಿಯೊ
ವಿಜಯ
ವಾಹಿನಿ..

ನಿರ್ಮಾಪಕರು... ಎಸ್. ಭಾವನಾರಾಯಣ + ಡಿ. ಬಿ. ನಾರಾಯಣ





# ಮೃಗಗಳ ಚಿಕ್ಕ ಪ್ರಪಂಚ

ಕಲ್ಕತ್ತದ ಆಲಿಪುರದ ಸುಂದರ ಮಲೆನಾಡಿನಲ್ಲಿ ಜಗತ್ತಿನ ಎಲ್ಲಾ ಭಾಗಗಳಿಂದ ತಂದ ಜೀವಂತ ಮೃಗಗಳ ಮತ್ತು ಪಕ್ಷಿಗಳ ಒಂದು ಅದ್ಭುತ ಸಂಗ್ರಹವನ್ನು ಜನರು ನೋಡುವುದಕ್ಕಾಗಿ ಇರಿಸಲಾಗಿದೆ. ನಮ್ಮ ಎಲ್ಲಾ ಮೃಗಶಾಲೆಗಳಪೈಕಿ ಇದು ಅತಿ ದೊಡ್ಡದು ಮತ್ತು ರಮಣೀಯವಾದುದು.

ಈ ಮೃಗಶಾಲೆಯು ತಂತಿಯ ಬೇಲಿ ಹಾಕಲ್ಪಟ್ಟು, ಹೂಗಳು ತುಂಬಿದ ಪೊದೆಗಳಿಂದಲೂ, ಬಿಳಿಕಾಗದದ ದೋಣಿಗಳೋ ಎಂಬಂತೆ ತೇಲಾಡುತ್ತಿರುವ ಸುಂದರವಾದ ಹಂಸಗಳಿಂದ ಕೂಡಿ ಗಾಜಿನಂತೆ ಥಳಥಳಿಸುತ್ತಿರುವ ಕೊಳಗಳಿಂದ ಅಲಂಕೃತವಾಗಿದೆ. ಮರಗಳ ತುದಿಗಳಲ್ಲಿ ಮತ್ತು ಪಂಜರಗಳಲ್ಲಿರುವ ಪಕ್ಷಿಗಳು ತಮ್ಮ ಕೂಗು, ಕೇಕೆಗಳಿಂದ ಪ್ರೇಕ್ಷಕರನ್ನು ಸ್ವಾಗತಿಸುತ್ತಿರುವಾಗ ಒಂದು ಗೂಡಿನಲ್ಲಿ ಒಂದು ನವಿಲು ತನ್ನ ಅನೇಕ ವರ್ಣಗಳ ಗರಿಗಳನ್ನು ಹೆಮ್ಮೆಯಿಂದ ಪ್ರದರ್ಶಿಸುತ್ತದೆ. ಅದೋ, ಅಲ್ಲಿ ಒಂದು ಮಗು ಬೊಟ್ಟುಗಳುಳ್ಳ ಸಾಧುವಾದ ಜಿಂಕೆಗೆ ಕಾಳುಗಳನ್ನು ತಿನ್ನಿಸುತ್ತಿದೆ. ಸಮೀಪದಲ್ಲೇ ಒಂದು ಗಂಡು ಜಿಂಕೆ ಮೇಯುತ್ತಿದೆ. ಇನ್ನು ಸ್ವಲ್ಪ ದೂರದಲ್ಲಿಯೇ ಒಬ್ಬನು ಸ್ನೇಹಭಾವದ ಕಂಗಾರೂಗೆ ಕಾಯಿಗಳನ್ನು ಕೊಡುತ್ತಿದ್ದಾನೆ. .ಒಂದು ಪಂಜರದಲ್ಲಿ ಒಂದು ಹುಲಿ ಆರ್ಭಟಿಸುತ್ತಿದೆ. ಇನ್ನೊಂದರಲ್ಲಿ ಒಂದು ಸಿಂಹ ಮುದುರಿ ಮಲಗಿಕೊಂಡಿದೆ. ಒಂದು ಕೆಸರು ತುಂಬಿದ ಕೊಳದಲ್ಲಿ ಒಂದು ನೀರಾನೆಯು ಹೊರಳಾಡುತ್ತಿದೆ, ಮತ್ತೊಂದು ಹಳ್ಳದಲ್ಲಿ ಒಂದು ಖಡ್ಗಮೃಗ ಹಾಯಾಗಿ ಮಲಗಿದೆ. ಜೀಬ್ರಾಗಳ ಮತ್ತು ಜಿರಾಫೆಗಳ, ಕಾಡುಕೋತಿಗಳ ಮತ್ತು ಬಿಳಿಕರಡಿಗಳ, ಆನೆಗಳ ಮತ್ತು ಒಂಟೆಗಳ ಈ ಪುಟ್ಟ ಪ್ರಪಂಚವು ಅದ್ಭುತವಾಗಿದೆ. ಪ್ರತಿದಿನ ನೂರಾರು ಜನರು ಇಲ್ಲಿಗೆ ಬಂದು ಕಣ್ದಣಿವಂತೆ ನೋಡಿ ಆನಂದಿಸುವುದರಲ್ಲಿ ಆಶ್ಚರ್ಯವಿಲ್ಲ. ಇದೆಲ್ಲದರ ಜೊತೆಗೆ, ಪ್ರೇಕ್ಷಕರು ಇಲ್ಲಿನ ಉದ್ಯಾನಗಳಲ್ಲಿ ವನಭೋಜನ ಮಾಡುತ್ತಾರೆ. ತಿಂಡಿಗಳನ್ನು ತಿಂದು ಚಹವನ್ನು ಸವಿಯುತ್ತಾರೆ. ಮತ್ತು ಇವರು ಕುಡಿಯುವ ಚಹ–ಪ್ರೇಕ್ಷಕರ ಮತ್ತು ವನಭೋಜನಕ್ಕಾಗಿ ಹೋಗುವವರ ಅಚ್ಚುಮೆಚ್ಚಿನ ಬ್ರೂಕ್ ಬಾಂಡ್ ಚಹಾ. ಹೌದು, ಭಾರತದ ಎಲ್ಲಾ ಕಡೆಯಲ್ಲಿಯೂ ಇರುವಂತೆ ಕಲ್ಕತ್ತೆಯ ಜನರೂ ಸಹ ಬ್ರೂಕ್ ಬಾಂಡ್ ಚಹವನ್ನೇ ಬಹಳವಾಗಿ ಇಷ್ಟಪಡುತ್ತಾರೆ.

ವಾಸ್ತವವಾಗಿ, ಮೃಗಾಲಯವು ತನ್ನ ಅದ್ಭುತವಾದ ಅರಣ್ಯ ಜೀವಿಗಳಿಂದ ಪ್ರೇಕ್ಷಕರನ್ನು ಸಂತೋಷಪಡಿಸುತ್ತಿದ್ದರೆ, ಬ್ರೂಕ್ ಬಾಂಡ್ ಚಹ ತನ್ನ ಅಸಮಾನ ರುಚಿ ಮತ್ತು ತೋಟದಲ್ಲಿನ ಚಹಾದಷ್ಟೇ ತಾಜಾದಿಂದ ಅವರಿಗೆ ಉಲ್ಲಾಸವನ್ನೂ, ಉತ್ತೇಜನವನ್ನೂ ಕೊಡುತ್ತದೆ.

ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್

BB 296

## ಚಂದಾದಾರರಿಗೆ ವಿಜ್ಞಪ್ತಿ

ಮುಂದಿನ ತಿಂಗಳ ಚಂದಮಾಮ ಈ ತಿಂಗಳ ಕಡೇವಾರದಲ್ಲೇ ಪೋಸ್ಟು ಮಾಡಲ್ಪಡುತ್ತದೆ. ಸಕಾಲದಲ್ಲಿ ಪತ್ರಿಕೆ ಸೇರದಿದ್ದರೆ ಅವರವರ ಪೋಸ್ಟಾಫೀಸಿನಲ್ಲಿ ಫಿರ್ಯಾದಿಮಾಡಿ ಮುಂದಿನ ತಿಂಗಳು 10 ನೇ ತಾರಿಕಿನೊಳಗೆ ನಮಗೂ ತಿಳಿಸಬೇಕೆಂದು ಕೋರುತ್ತೇವೆ. ಅನಂತರ ಬರುವ ಕಂಪ್ಲೇಂಟು—ಕಳೆದ ತಿಂಗಳ ಪತ್ರಿಕೆ ಸೇರಲಿಲ್ಲವೆಂಬ ದೂರುಗಳನ್ನು ಗಮನಿಸಲಾಗುವುದಿಲ್ಲ.

★

## " ಚಂದಮಾಮ " ಕ್ಕೆ ಏಜಂಟರು ಬೇಕು

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಏಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **3-0-0** ಕಳುಹಿಸುತ್ತಾ ಇದ್ದರೆ ನಿಮಗೆ **8** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 1-0-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ
ಪಬ್ಲಿಕೇಷನ್ಸ್
ವಡಪಳನಿ, ಮದ್ರಾಸ್ - 26.

ಈಗಲೇ ಪ್ರಾರಂಭಿಸಿರಿ

# ದಂತಕ್ಷಯ ನಿವಾರಣೆಗೆ

★

ಸೊಗಸಾದ

ದಾರಿ!

★



**ಆಶ್ಚರ್ಯ:** ಪ್ರತಿಸಲ ಊಟವಾದೊಡನೇ ಲಿಸ್ಟರಿನ್ ಟೂತ್‌ಪೇಸ್ಟಿನಿಂದ ಬ್ರಷಿಂಗ್ ಮಾಡಿಕೊಂಡರೆ ದಂತಕ್ಷಯ ನಿವಾರಣೆಗೆ ಅನೇಕ ವಿಧಗಳಲ್ಲಿ ಸಹಕರಿಸುತ್ತದೆ.

1. ಅದು ವಿನಾಶಕಾರಕ ಕ್ರಿಮಿಗಳನ್ನು ಪ್ರತ್ಯಕ್ಷವಾಗಿ ಹೊಡೆದೋಡಿಸುತ್ತದೆ.
2. ಅದು ಹಲ್ಲುಗಾರೆಗೆ ಅಂಟಿಕೊಂಡ ಕೀಟಗಳನ್ನು ತೊಲಗಿಸುತ್ತದೆ.
3. ಅದು ಬಾಯಿಯಿಂದ ಸ್ರವಿಸುವ ದ್ರವಗಳನ್ನುಕೂಡ ತಡೆಯುತ್ತದೆ.

ಹೌದು....ಲಿಸ್ಟರಿನ್ ಟೂತ್‌ಪೇಸ್ಟ್ ಇವುಗಳನ್ನೆಲ್ಲಾ ನೆರವೇರಿಸುವುದುಮಾತ್ರವಲ್ಲದೆ ಹಲ್ಲುಗಳನ್ನು ಚೆನ್ನಾಗಿ ಶುಭ್ರಗೊಳಿಸುತ್ತದೆ. ನಿಮ್ಮ ಕಿರುನಗುವನ್ನು ಸಹಜಸುಂದರಗೊಳಿಸುತ್ತದೆ. **ಅದರ ಒಳ್ಳೆಯ ಪರಿಮಳವೆಂದರೆ ಮಕ್ಕಳಿಗೆಷ್ಟೋ ಪ್ರೀತಿ!**

**ದಂತಕ್ಷಯವನ್ನು ಪ್ರತಿಭಟಿಸಿರಿ....**ಪರಿಶುದ್ಧವಾದ ಲಿಸ್ಟರಿನ್ ಟೂತ್‌ಪೇಸ್ಟನ್ನು ಪ್ರತಿಸಲ ಭೋಜನವಾದಾಗಲೆಲ್ಲಾ ಉಪಯೋಗಿಸಿಕೊಳ್ಳಿ-ಇದು ಮಕ್ಕಳಿಗೆ ಅತೀ ಅಗತ್ಯವಾದುದು!




ದಂತಕ್ಷಯ ನಿವಾರಣೆಗೆ ಇದೇ
ಸೊಗಸಾದ ದಾರಿ!

14S

**Made by the makers of famous LISTERINE ANTISEPTIC**



# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ಲಲಿತಸಾಹಿತ್ಯದಲ್ಲಿರುವ ನವರಸಗಳಲ್ಲಿ ಎಲ್ಲರಿಗೂ ಪ್ರಿಯವಾದ ರಸವೆಂದರೆ ಹಾಸ್ಯರಸ. ಕೆಲವರಿಗೆ ಕೆಲವೊಂದು ರಸವು ಪ್ರಿಯವಾದ-ದಾಗಿದ್ದರೂ ಹಾಸ್ಯರಸವು ಬೇಡೆಂಬವರು ಯಾರೂ ಇರಲಾರರು. ಉಳಿದೆಲ್ಲಾ ರಸಗಳಿದ್ದೂ ಹಾಸ್ಯರಸವಿಲ್ಲದ ಸಾಹಿತ್ಯವು ಎಲ್ಲರ ಮೆಚ್ಚುಗೆಗೆ ಪಾತ್ರವಾಗುವುದೂ ಇಲ್ಲ. ಶೃಂಗಾರ, ವೀರ, ಕರುಣೆ, ಅದ್ಭುತ, ಶೋಕ, ಭಯಾನಕ, ಬೀಭತ್ಸ, ಶಾಂತ ಈ ಎಂಟು ರಸಗಳನ್ನು ಅನುಭವಿಸಲು ತಕ್ಕ ರಸನೆ ಸಾಮಾನ್ಯ ಎಲ್ಲಾ ಪ್ರಾಣಿಗಳಿಗೂ ಇರುತ್ತದೆಂದು ಹೇಳಬಹುದು. ಆದರೆ ಹಾಸ್ಯರಸವನ್ನು ಅನುಭವಿಸುವ ಆ ಪ್ರತ್ಯೇಕ ರಸನೆ ಮಾನವರಿಗೆ ಹೊರತು ಮತ್ತಾವ ಪ್ರಾಣಿಗಿದೆ? ಹಾಸ್ಯರಸದಿಂದ ಹುಟ್ಟುವ ಆ ನಗು, ಮನುಷ್ಯನ ಹೊರತು ಮತ್ತಾವ ಪ್ರಾಣಿಗೆ ಬರಬಲ್ಲುದು? ದೇವರು ಮನುಷ್ಯರಿಗೆಮಾತ್ರ ಒದಗಿಸಿದ ಒಂದು ವರಪ್ರಸಾದವೇ ನಗು. ಒಬ್ಬರ ಮುಖದಲ್ಲಿ ನಗು ತಾಂಡವಿಸಿದರೆ, ಅದು ಎಲ್ಲರ ಮುಖದಲ್ಲಿಯೂ ಪ್ರತಿಫಲಿಸುವುದು. ಅಂತೆಯೇ ನಾವೂ ಆಗಾಗ ಹಾಸ್ಯರಸವನ್ನು ಒದಗಿಸುವಂತೆ ಈ ಸಂಚಿಕೆಯಲ್ಲಿ ಶೇಕ್ಸ್‌ಪಿಯರ್ ಮಹಾಕವಿಯ, 'ಅವಳಿಜವಳಿಗಳು', 'ಹಾಸ್ಯಗಾರ ಅವಂತಿ' ಮತ್ತು 'ಮೋಜಿನ ಮೇಜವಾನಿ' ಮೊದಲಾದ ತುಸು ಹೆಚ್ಚಿನ ಹಾಸ್ಯಕಥೆಗಳನ್ನು ಒದಗಿಸಿದ್ದೇವೆ. ನಿಮ್ಮ ಮುಖದಲ್ಲಿ ಮಂದಹಾಸದ ಶೋಭೆ ಮಿನುಗಲಿ!

ಸಂಪುಟ ೨೧] ಡಿಸೆಂಬರ್ ೧೯೫೮ [ಸಂಚಿಕೆ ೬



# ಮುಖಚಿತ್ರ

ಕಾರ್ತೀಕಮಾಸದಲ್ಲಿ ಒಂದುದಿನ ಬೆಳಗ್ಗೆ ಶ್ರೀಕೃಷ್ಣನು ಪಾಂಡವರ ರಾಯಬಾರಿಯಾಗಿ ಹಸ್ತಿನಾಪುರಕ್ಕೆ ಹೊರಟನು. ದಾರುಕನು ಸಾರಥಿಯಾಗಿದ್ದ ಕೃಷ್ಣನ ರಥದಲ್ಲಿ ಅನೇಕ ಆಯುಧಗಳನ್ನು ಧರಿಸಿಕೊಂಡು ಕೃಷ್ಣಸಾತ್ಯಕಿಯರು ಕುಳಿತುಕೊಂಡರು. ಪಾಂಡವರೂ ಮತ್ತಿತರರೂ ಸ್ವಲ್ಪದೂರದವರೆಗೆ ಶ್ರೀಕೃಷ್ಣನನ್ನು ಸಾಗಕಳುಹಿಸಿದರು.

ದಾರಿಯಲ್ಲಿ ವೃಕಸ್ಥಳವೆಂಬಲ್ಲಿ ಕೃಷ್ಣನು ಬೀಡುಬಿಟ್ಟನು. ಇದನ್ನರಿತು ಧೃತರಾಷ್ಟ್ರನು ವೃಕಸ್ಥಳದಿಂದ ಹಸ್ತಿನಾಪುರದವರೆಗೂ ದಾರಿಯಲ್ಲಿ ಕೃಷ್ಣನಿಗೆ ಅನೇಕ ಬಗೆಯ ಸನ್ಮಾನಗಳ ಏರ್ಪಾಡು ಮಾಡಿಸಿದನು.

ಕೃಷ್ಣನು ಹಸ್ತಿನಾಪುರಕ್ಕೆ ಬರುತ್ತಲೇ ಧೃತರಾಷ್ಟ್ರನ ಸಭೆಗೆ ಹೋದನು. ಅಲ್ಲಿ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮಾದಿಗಳೊಡನೆ ಸ್ವಲ್ಪಹೊತ್ತು ಮಾತುಕತೆಯಾಡಿ ಧೃತರಾಷ್ಟ್ರನಿಂದ ಅಪ್ಪಣೆ ಪಡೆದು ವಿದುರನ ಮನೆಯಲ್ಲಿ ತಂಗಲು ತೆರಳಿದನು. ಮಧ್ಯಾಹ್ನದಲ್ಲಿ ಕುಂತೀದೇವಿಯನ್ನು ನೋಡಿದನು. ಕುಂತೀದೇವಿ ತನ್ನ ಪುತ್ರರು ಪಟ್ಟ ಕಷ್ಟಗಳನ್ನು ನೆನೆದು ಕೃಷ್ಣನ ಮುಂದೆ ಅತ್ತಳು. ಅವರಿಗಿನ್ನು ಒಳ್ಳೆಯಕಾಲ ಬರುತ್ತದೆಂದು ಕೃಷ್ಣನು ಕುಂತೀದೇವಿಗೆ ಸಮಾಧಾನ ಹೇಳಿದನು.

ಅಲ್ಲಿಂದ ಶ್ರೀಕೃಷ್ಣನು ದುರ್ಯೋಧನನ ಸಭಾಭವನಕ್ಕೆ ಹೋದನು. ದುರ್ಯೋಧನನು ಕೃಷ್ಣನನ್ನು ಗೌರವಿಸಿ ಆ ರಾತ್ರಿ ತನ್ನೊಂದಿಗೆ ಭೋಜನಮಾಡುವಂತೆ ಕೇಳಿಕೊಂಡನು. ಆದರೆ ಕೃಷ್ಣನು ಒಪ್ಪದೆ ವಿದುರನ ಮನಗೆ ಹೋಗಿ ಅಲ್ಲಿಯೇ ಸಂತೋಷವಾಗಿ ಉಂಡು ಅಲ್ಲೇ ಮಲಗಿದನು.

ಮರುದಿನ ದುರ್ಯೋಧನನ ಮಹಾಸಭೆಯಲ್ಲಿ ಕೃಷ್ಣನಿಗೆ ಉಚಿತ ಸನ್ಮಾನ ನಡೆಯಿತು. ಕೃಷ್ಣನು ತನ್ನ ರಾಯಬಾರವನ್ನೊಪ್ಪಿಸಿದನು. ಕೃಷ್ಣನು ಧೃತರಾಷ್ಟ್ರನನ್ನು ಕುರಿತು—"ಈಗಲೇ ನೀವು ಮಹಾ ಚಕ್ರವರ್ತಿಗಳಾಗಿರುವಿರಿ. ಪಾಂಡವರನ್ನು ಕೂಡಾ ನಿಮ್ಮ ಬಳಗದೊಂದಿಗೆ ಸೇರಿಸಿಕೊಂಡರೆ ನೀವು ದೇವತೆಗಳಿಗೇ ಸಮಾನರಾಗುವಿರಿ. ಇದನ್ನು ಬಿಟ್ಟು ಯುದ್ಧವೇ ನಡೆದರೆ ಇಲ್ಲಿರುವ ರಾಜರೆಲ್ಲರೂ ಖಂಡಿತವಾಗಿ ಸಾಯುತ್ತಾರೆ" ಎಂದು ಒತ್ತಿ ಹೇಳಿದನು.

ಧೃತರಾಷ್ಟ್ರ, ಭೀಷ್ಮ ಮೊದಲಾದವರ ಹಿತನುಡಿಯನ್ನುಕೂಡಾ ಕೇಳದೆ ದುರ್ಯೋಧನನು "ನಾನು ಆ ಪಾಂಡವರಿಗೆ ಸೂಜಿಮೊನೆಯಷ್ಟು ನೆಲವನ್ನುಕೂಡಾ ಕೊಡಲಾರೆ!" ಎಂದು ಕಾಡಾಖಂಡಿತವಾಗಿ ಹೇಳಿ, ಶಕುನಿ, ಕರ್ಣ, ದುಃಶಾಸನ ಮೊದಲಾದವರೊಂದಿಗೆ ಸಭೆಯಿಂದಲೇ ಎದ್ದು ಹೋಗಿಬಿಟ್ಟನು.



# ಕಾಗೆ ಗೂಗೆಗಳು

"ಕಾನನದೊಳು ಹಸಿದೊಂದು ಕೇಸರಿಗೆ
ಎನಿತಲೆದೊಂದೂ ಸಿಗಲಿಲ್ಲ.
ತಿರುಗಿ ಬಳಲಿ, ಕಂಡೊಂದು ಗುಹೆ, ಒಳಗೆ
ಹೊಕ್ಕು ಮಲಗಿಕೊಂಡಿತು ಮೆಲ್ಲ.

ಅದು ನರಿಯೊಂದರ ಮನೆಯಾಗಿದ್ದಿತು
ಆ ನರಿ ಬರುತಿದ್ದಿತು ಮೆಲ್ಲ;
ನೆಲದಲಿ ಬಿದ್ದಿಹ ಹೆಜ್ಜೆಯ ಗುರುತನು
ಕಂಡು ಯೋಚಿಸಿತು, ಇದೇನೆಲಾ!

ಒಳಗಾರಿಹರೋ ಇಲ್ಲೋ ಅರಿಯಲು
ಯುಕುತಿ ತೆಗೆದು 'ಓಗವಿ!' ಎಂದು
ಕರೆಯುತೆ ಪೇಳಿತು 'ಓಗೊಡದಿದ್ದರೆ
ಒಳಬರಲಾರೆನು ನಾನೆಂದೂ!'

'ಆಹಾ! ನರಿ ಸಿಕ್ಕುವುದೀಗೀ ಗುಹೆ
ಓಗೊಡುವುದೊ ಏನೋ?' ಎಂದು
'ಓಹೊಂ' ಎಂದಿತು ಸಿಂಹವು, ತಕ್ಷಣ
ಓಡಿ ಬದುಕಿತಾ ನರಿಯಂದು!"

ಹೀಗೆಂದಾ ರಕ್ತಾಕ್ಷ ತನ್ನವರ
ಕೂಡಿ ಎತ್ತೊ ಹೊರಟೇ ಹೋಯ್ತು.
ಕಾಕಮಂತ್ರಿ ಸ್ಥಿರಜೀವಿಗೆ ಈಪರಿ
ನಡೆದುದೆಲ್ಲವೂ ಒಳಿತಾಯ್ತು.

ಗೂಡು ಕಟ್ಟುವಾ ನೆವನದಿ ಒಣಗಿದ
ಹುಲ್ಲು ಪುಳ್ಳೆಗಳ ಸೇರಿಸಿತು.
ಹಗಲು ಗೂಗೆಗಳು ನಿದ್ರಿಸಿಕೊಂಡಿರೆ
ತನ್ನ ದೊರೆಯ ಬಳಿಗೈತಂತು.

"ದೊರೆಯೆ, ಹೊರಡು ನಾ ಕಂಡು ಬಂದೆನ್ನೈ
ವೈರಿ ಘೂಕಗಳ ಮರ್ಮವನು
ಸುತ್ತೂ ಒಣಗಿದ ಪುರುಳೆಯ ಸೇರಿಸಿ
ಇಟ್ಟಿರುವೆನು, ಹೊರಡಿರಿ ಇನ್ನು.

ಹಗಲಲಿ ಕಾಣದ ಕುರುಡು ಗೂಗೆಗಳ
ಕೊಲ್ಲಲಿದೇ ಒಳ್ಳೆಯ ಸಮಯ.
ಬೆಂಕಿಯು ಕೊಳ್ಳಿಯ ಹಾಕಿದ ಮಾತ್ರಕೆ
ಧಗಧಗ ಭಗಭಗ—ಶತ್ರು ಲಯ!"

ಮಾರಂಗ

ಕಾಕರಾಜನಾಶ್ಚರ್ಯ ಸಂಭ್ರಮದಿ
ಮಂತ್ರಿ ಸ್ಥಿರಜೀವಿಯ ಹೊಗಳಿ
ಕಾಗೆಯ ದಂಡನು ಕೂಡಿಸಿ, ಹೊರಟಿತು
ಉರಿಕೊಳ್ಳಿಯ ಕೊಕ್ಕಿನ ಧಾಳಿ!

ಘೂಕರಾಜನಾ ಗವಿಯ ಸುತ್ತಲೂ
ಒಟ್ಟಿದ ಒಣಪುರುಳೆಯ ಬಣಕೆ
ಕೊಟ್ಟವು ಕೊಳ್ಳಿಯ! ಧಗಧಗ ಉರಿಯಿತು!
ಮಡಿದುವೆಲ್ಲ ಗೂಗೆಗಳೊಳಗೇ!

ಇಂತು ವೈರಿಗಳ ಸಾಯಿಸಿ ನೆಮ್ಮದಿ
ಯಿಂದ ಮೇಘವರ್ಣಾಧಿಪನು,
ತಮ್ಮಾ ಮರದಲಿ ಹಿರಿಯೊಡ್ಡೋಲಗ
ನೆರೆಸಿತೀಯೆ ಸನ್ಮಾನವನು.

ಸ್ಥಿರಜೀವಿಯ ತಂತ್ರದ ಪರಿಯೆಲ್ಲವ
ಕೇಳ್ವ ಕುತೂಹಲ ಸಭಿಕರಿಗೆ,
ರಾಜಾಜ್ಞೆಗೆ ತಲೆವಾಗುತೆ ಪೇಳಿತು,
ಮಂತ್ರಿ ಸ್ಥಿರಜೀವಿ ಸಭಿಕರಿಗೆ:

"ಒಡೆಯನ ಚಿಂತೆಯ ಹೋಗಲಾಡಿಸಲು
ಅಸಿಧಾರಾವ್ರತ ಹಿಡಿದಂತೆ
ಶತ್ರುವಿನಾಂತರ್ಯವನೇ ಹೊಕ್ಕೆನು
ಹಿಂದೊಂದು ಹಾವು ಗೈದಂತೆ."

'ಏನಾ ಕಥೆ?' ಎಂದೆಲ್ಲವು ಕೇಳ್ದುವು,
ಕೌತುಕ ತುಂಬಿದ ದನಿಯಿಂದ.
ಮೇಘವರ್ಣನೂ ಪೇಳದನೆನ್ನಲು
ಸ್ಥಿರಜೀವಿಯೆಂದ ಮುದದಿಂದ :



"ಆ ಕಥೆ ಕೇಳಿರಿ, ನಾಗರ ಹಾವದು
ಮುನಿವೃತ್ತಿಯನೇ ಹಿಡಿದಿತ್ತು.
ಬಲು ಮುದಿಯಾಯಿತು, ಬಲವುಡುಗಿದ್ದಿತು
ಬೇಟೆಗೆ ಕಸು ಸಾಲದೆ ಹೋಯ್ತು.

ಯುಕ್ತಿಯನೊಂದನು ಯೋಚಿಸಿಕೊಂಡಿತು,
ಕೊಳದ ತೀರದಲಿ ಮುನಿಯಂತೇ
ಬರಿದೇ ನಿಂತಿತು, ತಿನ್ನದು ನೋಡದು,
ಬಹಳ ಭಕ್ತ ತಾನಾದಂತೆ.

ಕಪ್ಪೆಗಳೆಲ್ಲಾ ಸುತ್ತೂ ಸೇರ್ದುವು
ಕಪ್ಪೆಯರಸು, ಕೇಳಿದನತಿ ನಯದಿ
'ಏಕೀ ತಪವಯ್ಯಾ? ಸುಖ ಪಡೆಯದೆ
ಸೊರಗುವಿರೇತಕೆ ಈ ತೆರದಿ?'

ಹಾವದಕೆಂದಿತು : 'ಪಾಪಿಯಾದ ನಾನ್
ಬ್ರಾಹ್ಮಣನೋರ್ವನ ಪುತ್ರನನು,
ಕಚ್ಚಿದೆ, ಆತನು ಶಪಿಸಿದನೆನ್ನನು
'ಹೊರು ಕಪ್ಪೆಗಳ ಸದಾ ನೀನು!'

ಕಪ್ಪೆಗಳೊಲಿದಿತ್ತುದ ತಿನ್ನೆಂದನು;
ನಿಮ್ಮ ಸೇವೆಗೇ ಕಾದಿಹೆನು'

ಕೇಳಿ ಹರುಷದಿಂ ಕಪ್ಪೆರಾಜ ತಾ
ಹಾವು ಸವಾರಿಯ ಮಾಡಿದನು!

ಹೀಗೆ ಸೊಗಸಿನಿಂ, ಸಪರಿವಾರದಿಂ
ಕಪ್ಪೆರಾಜ ಹಾವಿನ ಮೇಲೆ
ಸವಾರಿ ಗೈಯಲು, ಒಂದಿನ ಹಾವದು
ಮೆಲ್ಲಮೆಲ್ಲ ತೇಕುತ ತೆರಳೆ,

'ಏನಾಯ್ತೆನ'ಲಾ ಕಪ್ಪೆಗೆ ಹೇಳಿತು
'ತಿಂಡಿ ಸಿಗದೆ ಬಲ ಹೋಯ್ತಯ್ಯಾ!'
'ಅಯ್ಯೋ! ಪಾಪವೆ, ಕಿರಿಯ ಕಪ್ಪೆಗಳ
ತಿನ್ನು, ಶಂಕಿಸದೆ ತಿನ್ನಯ್ಯ!'

ಇನ್ನೇನಿದೆ? ದೊರೆಯನುಮತಿಯಾಯಿತು!
ನಿರ್ಭಯದಿಂ ಕಿರುಗಪ್ಪೆಗಳ
ಅಪ್ಪಗಳನು ಚಪ್ಪರಿಸುವ ಚಂದದಿ
ಫಳಹಾರವೆ ಬಲು ಗಮ್ಮತಲಾ!

ಹೀಗೇನೋ ತಕ್ಕುಪಾಯದಿಂದಲಿ
ಸಾಧಿಸಿ ಬಂದೆನು ಕಾರ್ಯವನು!"
ಕಾಗೆಗಳೆಲ್ಲಾ 'ಭಲೆಭಲೆ' ಎನ್ನುತ
ಹೊಗಳಿದುವಾ ಸ್ಥಿರಜೀವಿಯನು.

★ 'ಕಾಗೆ - ಗೂಗೆಗಳು' ಮುಗಿಯಿತು ★





# ಹಾಸ್ಯಗಾರ ಅವಂತಿ

ಚೈನಾದೇಶದಲ್ಲಿ ನಜರುದ್ದೀನ್ ಅವಂತಿ ಎಂಬ ಹಾಸ್ಯಗಾರನಿದ್ದನು. ಅವನನ್ನು ಕುರಿತು ಅನೇಕ ಹಾಸ್ಯಕಥೆಗಳನ್ನು ಹೇಳುತ್ತಾರೆ.

ಒಂದುದಿನ ರಾತ್ರಿ ಅವಂತಿ ಶ್ಮಶಾನದಕಡೆಗೆ ಹೋಗುತ್ತಿದ್ದ. ಅವನ ಹಿಂದೆ ಕೆಲವಾರು ಸವಾರರು ಬರುತ್ತಿದ್ದರು. ಅವರು ಕಳ್ಳರಿರ ಬಹುದೆಂದು ಅವನಿಗೆ ಸಂಶಯವುಂಟಾಯಿತು. ಅವನು ಕೂಡಲೇ ಅಲ್ಲೊಂದು ಸಮಾಧಿಯಲ್ಲಿ ತಲೆ ಮರೆಸಿಕೊಂಡನು. ಆದರೆ ಸವಾರರು ಕಂಡುಬಿಟ್ಟರು. ಅವರು ಸಮಾಧಿಯಬಳಿಗೇ ತಮ್ಮ ಕುದುರೆಗಳನ್ನು ಓಡಿಸಿಕೊಂಡು ಬಂದು "ಲೋ, ನೀನು ಯಾರು?" ಎಂದು ಅವಂತಿಯನ್ನು ಪ್ರಶ್ನೆಮಾಡಿದರು. ಅವಂತಿ ಸಮಾಧಿಯಿಂದ ಹೊರಗೆ ತನ್ನ ತಲೆ ತೂರಿಸಿ "ನಾನು ನಿರ್ಜೀವ ವ್ಯಕ್ತಿ. ನನ್ನನ್ನು ಇಲ್ಲಿ ಸಮಾಧಿ ಮಾಡಿದ್ದಾರೆ" ಎಂದ.

"ಹಾಗಾದರೆ ಈವೇಳೆಯಲ್ಲಿ ಹೊರಗೇಕೆ ಬಂದೆ?" ಸವಾರರ ಸವಾಲು. "ತಂಗಾಳಿ ಸೇವಿಸಲು ಬರಬೇಕಾಯಿತು" ಎಂದ ಅವಂತಿ.

"ಎಲಎಲಾ, ಸತ್ತವರಿಗೂ ಹವಾ ಅಗತ್ಯವೇ?" ಎಂದು ಕೇಳಿದರು.

"ಅಗತ್ಯವೇನಿಲ್ಲ, ನಾನು ಅವಸರಪಟ್ಟೆ ಅಷ್ಟೇ" ಎಂದು ಹೇಳಿ ಅವಂತಿ ತಲೆಯನ್ನು ಒಳಗೆಳೆದುಕೊಂಡನು.

ಮತ್ತೊಂದು ದಿನ ಅವಂತಿಯ ಮನೆಗೆ ಒಬ್ಬ ಕಳ್ಳ ಕನ್ನಹಾಕಿದನು. ಅವಂತಿ ಕಳ್ಳನನ್ನು ಕಂಡು ಪೆಟ್ಟಿಗೆಯೊಂದರಲ್ಲಿ ಬಚ್ಚಿಟ್ಟುಕೊಂಡನು. ಕಳ್ಳ ಮನೆಯನ್ನೆಲ್ಲಾ ಶೋಧಿಸಿದ. ಏನೂ ಸಿಗಲಿಲ್ಲ. ಮೂಲೆಯಲ್ಲಿದ್ದ ಹಳೆಯ ಜಾಕಾಯಿ ಪೆಟ್ಟಿಗೆಯ ಮುಚ್ಚಳ ತೆಗೆಯಲು ಅದರಲ್ಲಿ ಅವಂತಿ ಕಾಣಿಸಿದ.

"ಎಲಾ ನೀನು ಇಲ್ಲಿದ್ದೆಯೊ?" ಎಂದ ಕಳ್ಳ.

"ನಿನಗೆ ಬೇಕಾದ ವಸ್ತುಗಳೊಂದೂ ನನ್ನ ಮನೆಯಲ್ಲಿಲ್ಲವಲ್ಲಾ ಎಂದು ನಾಚಿಕೆಯಿಂದ ಇಲ್ಲಿ ಅಡಗಿಕೊಂಡೆ" ಎಂದ ಅವಂತಿ.

ಇನ್ನೊಮ್ಮೆ ಅವಂತಿಯ ಮನೆಗೆ ಕಳ್ಳರು ಬಿದ್ದು ಸಾಮಾನುಗಳನ್ನೆಲ್ಲಾ ಹೊತ್ತುಕೊಂಡು ಹೋಗುತ್ತಿದ್ದರು. ಒಂದೆರಡು ಚಿಲ್ಲರೆಪಲ್ಲರೆ

ಡಿ. ಸುಬ್ರಹ್ಮಣ್ಯ

ಸಾಮಾನುಗಳನ್ನು ತೆಗೆದುಕೊಂಡು ಅವಂತಿ ಅವರ ಹಿಂದೆಯೇ ಹೋದ. ಕಳ್ಳರಲ್ಲೊಬ್ಬನು ಹಿಂತಿರುಗಿ ನೋಡಿ "ಅವಂತಿ! ಎಲ್ಲಿಗಯ್ಯಾ ಪ್ರಯಾಣ?" ಎಂದು ಕೇಳಿದ.

"ಏನಿಲ್ಲ, ಬಹಳ ದಿನಗಳಿಂದ ಮನೆ ಖಾಲಿ ಮಾಡುವ ಯೋಚನೆಯಿತ್ತು. ಆದರೆ ಗಾಡಿ ಬಾಡಿಗೆ ಕೊಡಲು ಹಣವಿರಲಿಲ್ಲ. ಸದ್ಯ ನಿಮ್ಮ ಪುಣ್ಯದಿಂದ ಮನೆ ಬದಲಾಯಿಸುವ ಯೋಗ ಲಭಿಸಿತು" ಎಂದ ಭೂಪ ಅವಂತಿ.

ಮಿತ್ರನೊಬ್ಬನು ಅವಂತಿಯನ್ನು "ನಿನಗೆ ಸೂರ್ಯನನ್ನು ಕಂಡರೆ ಇಷ್ಟವೋ ಇಲ್ಲ ಚಂದ್ರನೆಂದರೆ ಇಷ್ಟವೋ" ಎಂದು ಕೇಳಿದ. "ಚಂದ್ರನೆಂದರೆ ತುಂಬಾ ಪ್ರೀತಿ" ಅವಂತಿ ಹೇಳಿದ. "ಅದೇಕೆ?" ಮಿತ್ರನು ಪ್ರಶ್ನಿಸಿದ.

"ನೋಡು ಮಹರಾಯ, ಹಗಲು ಹೊತ್ತು ನಮಗೆ ಯಥೇಚ್ಛವಾಗಿ ಬೆಳಕಿರುವಾಗ ಸೂರ್ಯ ಬರುತ್ತಾನೆ. ಆದರೆ ಚಂದ್ರನು ಕತ್ತಲಾಗಿರುವಾಗ ಬಂದು ಬೆಳಕು ನೀಡುತ್ತಾನೆ" ಸಮಾಧಾನ ಕೊಟ್ಟ ಅವಂತಿ.

"ಪ್ರಪಂಚದಲ್ಲಿರುವ ನೀರಿಗೆ ಬೆಂಕಿ ತಗುಲಿ ಉರಿಯ ತೊಡಗಿದರೆ ಮೀನುಗಳೇನು ಮಾಡುತ್ತಿದೆ?" ಯಾರೋ ಅವಂತಿಯನ್ನು ಕೇಳಿದರು. "ಹಾಗೆ ನಡೆದರೆ ಮೀನುಗಳೆಲ್ಲ ಮರವೇರಿಬಿಟ್ಟಾವು" ಅವಂತಿಯ ಉತ್ತರವಿದು. "ಬೆಳಗಾದಕೂಡಲೇ ಮಾನವರೆಲ್ಲ ಎದ್ದು ನಾನಾ ದಿಕ್ಕುಗಳಿಗೆ ಹೋಗುತ್ತಾರೆ. ಕಾರಣವೇನು ಹೇಳುವೆಯಾ?" ಎಂದು ಅವಂತಿಯನ್ನು




ಕೆಲವು ಮಿತ್ರರು ಕೇಳಲು, "ಅವನು ಹೀಗೆಂದು ತಟಕ್ಕನೆ ನುಡಿದನು: "ಅಲ್ಲೋ ಬೆಪ್ಪರೆ! ಮನುಷ್ಯರೆಲ್ಲ ಒಂದೇಕಡೆ ಹೋದರೆ ಭೂಮಿ ಅತ್ತ ಕಡೆಯೇ ಒರಗಿಬಿಡೋದಿಲ್ಲವೇ?"

ಶವವನ್ನು ಸಾಗಿಸುವಾಗ ಶವದಾನಿಯ ಮುಂದೆ ನಡೆಯುವುದು ಉತ್ತಮವೋ, ಎಂದು ಅವಂತಿಯನ್ನು ಯಾರೋ ಕೇಳಿದರು.

"ಹೇಗಾದರೂ ಪರವಾಗಿಲ್ಲ, ಶವದಾನಿಯೊಳಗಿಲ್ಲದ್ದಿದ್ದರೆ ಸರಿ" ಎಂದ ಅವಂತಿ.

ಒಂದುದಿನ ಅವಂತಿಗೆ ದಾರಿ ತಪ್ಪಿದ ಕುರಿ ಮರಿಯೊಂದು ಸಿಕ್ಕಿತು. ಅವನು ಅದನ್ನು ಅಡಿಗೆ ಮಾಡಿಸಿ ತಿಂದುಬಿಟ್ಟನು. ಈ ವಿಷಯ ತಿಳಿದ ಗೆಳೆಯನೊಬ್ಬನು "ಅವಂತಿ, ಈ ಪಾಪ ಮಾಡಿದ್ದಕ್ಕೆ ಭಗವಂತನ ಮುಂದೇನು

ಹೇಳುವೆ?" ಎಂದನು. "ನಾನು ತಿಂದಿಲ್ಲವೆಂದು ಹೇಳಿ ಬಿಡುತ್ತೇನೆ" ಎಂದ ಅವಂತಿ.

"ಕುರಿ ನಿನ್ನವಿರುದ್ಧವಾಗಿ ಸಾಕ್ಷ್ಯ ಹೇಳಿದರೇನು ಮಾಡುವೆ?" ಮತ್ತೆ ಪ್ರಶ್ನಿಸಿದ ಮಿತ್ರ.

"ಕುರಿ ಬಂದರೆ ಕಷ್ಟವೇನು ಬಂತು. ಮತ್ತೆ ಅದನ್ನು ತೆಗೆದುಕೊಂಡು ಹೋಗಿ ಅದರ ಯಜಮಾನನ ವಶಮಾಡುತ್ತೇನೆ" ಎಂದು ಅವನು ಉತ್ತರವಿತ್ತ.

ಒಮ್ಮೆ ಅವಂತಿಗೆ ಹಣ ಬೇಕಾಯಿತು. ಹೊರೆ ಹೊತ್ತು ಹಣ ಸಂಪಾದಿಸಲು, ಹಗ್ಗವೊಂದನ್ನು ತೆಗೆದುಕೊಂಡು ಪೇಟೆಗೆ ಹೋದನು. ಅಲ್ಲೊಬ್ಬ ಶ್ರೀಮಂತನು ಪಿಂಗಾಣಿಗಳನ್ನು ಮರದಪೆಟ್ಟಿಗೆಯಲ್ಲಿಟ್ಟುಕೊಂಡು ಕೂಲಿಯವನಿಗಾಗಿ ಎದುರು ನೋಡುತ್ತಿದ್ದನು. ಕೂಲಿಯವನಿಗೆ ಹಣಕ್ಕೆ ಬದಲಾಗಿ ಮೂರು ಉತ್ತಮ ಸಲಹೆಗಳನ್ನು ನೀಡುವುದಾಗಿ ಶ್ರೀಮಂತ ಹೇಳುತ್ತಿದ್ದುದರಿಂದ ಯಾರೂ ಅವನಬಳಿಗೆ ಸುಳಿಯಲಿಲ್ಲ. "ಹಣವನ್ನು ಎಂದಾದರೂ ಗಳಿಸಬಹುದು. ಉತ್ತಮ ಸಲಹೆಗಳು ನೆನೆಸಿಕೊಂಡಾಗ ಸಿಗುವುದಿಲ್ಲ" ಎಂದು ಯೋಚಿಸಿ, ಅವಂತಿ ಪಿಂಗಾಣಿಸಾಮಾನಿನ ಪೆಟ್ಟಿಗೆಯನ್ನು ಹೊರಲು ಒಪ್ಪಿಕೊಂಡನು.

ಅವಂತಿ ನಡುದಾರಿಯಲ್ಲಿ "ತಾವು ಕೊಡುವ ಸಲಹೆಗಳೇನೋ ತಿಳಿಸುವಿರಾ?" ಎಂದು ಕೇಳಿದನು. "ತಿನ್ನುವುದಕ್ಕಿಂತ ಉಪವಾಸವಿರುವುದು ಉತ್ತಮವೆಂದು ಯಾರಾದರೂ ಹೇಳಿದರೆ ನಂಬಬೇಡ" ಇದು ಅವಂತಿಗೆ ಸಮಂಜಸವಾಗಿ ಕಾಣಿಸಿತು. "ಸವಾರಿಮಾಡುವುದಕ್ಕಿಂತಲೂ ಕಾಲುನಡಿಗೆ ಉತ್ತಮವೆಂದು ಯಾರಾದರೂ ಹೇಳಿದರೆ ನಂಬಬೇಡ" ಎಂದು ಶ್ರೀಮಂತ ಹೇಳಿದ. ಈ ಸಲಹೆ ಸಹ ಅವಂತಿಗೆ ಒಪ್ಪಿತು.

ಮೂರನೇಸಲ ಶ್ರೀಮಂತನು "ನಿನಗಿಂತಲೂ ಮೂರ್ಖನಾದ ಕೂಲಿಯವನು ಈ ಪ್ರಪಂಚದಲ್ಲಿರುವನೆಂದರೆ ನಂಬಬೇಡ" ಎಂದ. ಕೂಡಲೇ ಅವಂತಿ ಪೆಟ್ಟಿಗೆಯನ್ನು ಕೆಳಗೆಕುಕ್ಕಿ "ಈ ಪೆಟ್ಟಿಗೆಯಲ್ಲಿದ್ದ ಪಿಂಗಾಣಿ ಸಾಮಾನು ಒಡೆಯಲಿಲ್ಲವೆಂದು ಯಾರಾದರೂ ಹೇಳಿದರೆ ನಂಬಬೇಡ" ಎಂದು ಹೇಳಿ ಸೇಡು ತೀರಿಸಿಕೊಂಡನು.






## 5

[ತನ್ನನ್ನು ಹಿಂಬಾಲಿಸುತ್ತಿದ್ದ ಶತ್ರುಗಳಿಂದ ತಪ್ಪಿಸಿಕೊಂಡು ಸುಬಾಹು ಅರಮನೆಯನ್ನು ಸೇರಿಕೊಂಡನು. ಚಂದ್ರವರ್ಮನಿಗೆ ವೈರಿಗಳು ಪಟ್ಟಣವನ್ನು ಪ್ರವೇಶಿಸಿದ ವಿಷಯವನ್ನು ತಿಳಿಸಿದನು. ನಂತರ ಚಂದ್ರವರ್ಮನು ಸೇನಾನಿ ಧೀರಮಲ್ಲನೊಂದಿಗೆ ಅನೇಕಮಂದಿ ಶತ್ರುಗಳನ್ನು ಹತಗೊಳಿಸಿದನು. ಆದರೆ ಅವರಿಗೆ ಸರ್ಪಕೇತನು ಹೊಸ ಸೈನ್ಯದೊಂದಿಗೆ ಪಟ್ಟಣವನ್ನು ಪ್ರವೇಶಿಸಿದ ಸುದ್ದಿ ಮುಟ್ಟಿತು. ಚಂದ್ರವರ್ಮನು ತನ್ನ ಭಟರೊಂದಿಗೆ ದುರ್ಗವನ್ನು ರಕ್ಷಿಸಲು ಹೊರಟನು. ಶತ್ರುಗಳು ದುರ್ಗದ ದಿಡ್ಡೀಬಾಗಿಲನ್ನು ಒಡೆಯಲು ಪ್ರಯತ್ನಿಸುತ್ತಿದ್ದರು. ಚಂದ್ರವರ್ಮನು ಹಠಾತ್ತನೆ ಅವರಮೇಲೆ ಬಿದ್ದನು.]

ಚಂದ್ರವರ್ಮನ ಭಟರಿಗೂ ಸರ್ಪಕೇತನ ಸೈನಿಕರಿಗೂ ದಿಡ್ಡೀ ಬಾಗಿಲಬಳಿ ಘೋರಕದನವಾಯಿತು. ಅತ್ಯಧಿಕ ಸಂಖ್ಯೆಯಲ್ಲಿದ್ದ ಸರ್ಪಕೇತನ ಸೈನಿಕರು ಮೊದಮೊದಲು ಚಂದ್ರವರ್ಮನ ಭಟರ ಧಾಳಿಗೆ ತಡೆಯಲಾರದೆ ಹಿಮ್ಮೆಟ್ಟಿದರು. ಆದರೆ ತಮ್ಮ ಶತ್ರುಪಕ್ಷದ ಬಲವು ತೀರಾ ಕಡಿಮೆಯಾಗಿದೆಯೆಂದು ತಿಳಿದ ನಂತರ ಅವರು ಜೀವದ ಹಂಗುಬಿಟ್ಟು ನಿಕರವಾಗಿ ಹೋರಾಡಿದರು. ಹೀಗೆ ಸಲ್ಪ ಕಾಲ ಯುದ್ಧವಾಯಿತು. ಎಷ್ಟೇ ಪ್ರಯತ್ನಿಸಿದರೂ ದುರ್ಗದ ದ್ವಾರವನ್ನು ಸೇರಲು ಸಾಧ್ಯವಾಗದಿರಲು ಚಂದ್ರವರ್ಮನು ಹತಾಶನಾದನು. ಮುಂದೇನು ಮಾಡಬೇಕೋ ಅವನಿಗೆ ಹೊಳೆಯಲಿಲ್ಲ.

ಹೀಗಿರಲು ದೂರದಲ್ಲಿ ಮತ್ತೊಂದುದಳ ಬರುವ ಸೂಚನೆ ಕಂಡುಬಂತು. ಆಗ



ಸುಬಾಹು ತನ್ನ ಕುದುರೆಯನ್ನು ಚಂದ್ರವರ್ಮನಬಳಿಗೆ ಓಡಿಸಿ "ಯುವರಾಜಾ, ನಾವು ಈಗ ಇಕ್ಕಟ್ಟಿನಲ್ಲಿ ಸಿಲುಕಿಕೊಳ್ಳಲಿದ್ದೇವೆ. ಹಿಂದಿನಿಂದ ನಮ್ಮ ಮೇಲೆ ಬೀಳಲು ಸರ್ಪಕೇತನು ಅಶ್ವದಳವನ್ನು ರಣರಂಗಕ್ಕೆ ಕಳುಹಿಸಿರುವಂತಿದೆ" ಎಂದನು.

ಆಗಿನ ಪರಿಸ್ಥಿತಿಯಲ್ಲಿ ದುರ್ಗವನ್ನು ಸೇರಿಕೊಳ್ಳುವುದು ಅಸಾಧ್ಯವೆಂದು ಚಂದ್ರವರ್ಮನಿಗೆ ತೋರಿತು. ಎರಡು ಶತ್ರುಪಡೆಗಳ ನಡುವೆ ಸಿಕ್ಕಿಕೊಳ್ಳದೆ ಹೊರಬೀಳುವುದು ಅತ್ಯಂತ ಮುಖ್ಯವೆಂದು ಅವನು ಮನಗಂಡನು. ಸೇನಾನಾಯಕ ಧೀರಮಲ್ಲನೂ ಸಹ ಬರಲಿರುವ ವಿಷಮ ಪರಿಸ್ಥಿತಿಯನ್ನು ಗ್ರಹಿಸಿದನು. ಸೈನಿಕರು ಮಾಡುತ್ತಿದ್ದ ಗೊಂದಲದ ನಡುವೆ ಅವನು ಉಚ್ಚ ಸ್ವರದಲ್ಲಿ "ಯುವರಾಜರೇ, ನೀವು ಇಲ್ಲಿಂದ ಹೊರಬೀಳುವುದು ಉತ್ತಮ. ನಾನು ನನ್ನ ಭಟರೊಂದಿಗೆ ನಿಮಗೆ ದಾರಿ ಮಾಡಿ ಕೊಡುತ್ತೇನೆ" ಎಂದನು.

ಚಂದ್ರವರ್ಮನಿಗೆ ಸಾವಕಾಶವಾಗಿ ಯೋಚನೆಮಾಡಲೂ ವ್ಯವಧಿಯಿರಲಿಲ್ಲ. ಹಿಂದಿನಿಂದ ಬರುತ್ತಿದ್ದ ಶತ್ರುಸಂಗಡದ ಅಶ್ವದಳವು ಅವರನ್ನು ಸಮೀಪಿಸುತಿತ್ತು. ಚಂದ್ರವರ್ಮನು ತನ್ನ ಕುದುರೆಯನ್ನು ದುರ್ಗದ ದ್ವಾರದಕಡೆಯಿಂದ ಹಿಂದಕ್ಕೆ ತಿರುಗಿಸಿ "ಸುಬಾಹು" ಎಂದು ಕೂಗುತ್ತಾ ತನ್ನ ಖಡ್ಗದ ಸಹಾಯದಿಂದ ಶತ್ರುಸೈನಿಕರ ನಡುವೆ ದಾರಿಮಾಡಿಕೊಂಡು ಕುದುರೆಯನ್ನು ಮುಂದಕ್ಕೆ ನುಗ್ಗಿಸಿದನು. ಸುಬಾಹು ತನ್ನ ಯಜಮಾನನನ್ನು ಹಿಂಬಾಲಿಸಿದನು.

ಸುಬಾಹು ಚಂದ್ರವರ್ಮರು ಪರಾರಿಯಾಗುತ್ತಿರುವುದನ್ನು ಕಂಡು ಶತ್ರುದಳದವರು ಕೆಲವರು ಅವರನ್ನು ಅಟ್ಟಿಸಿಕೊಂಡು ಹೋಗಲು ಪ್ರಯತ್ನಿಸಿದರು. ಆದರೆ ಸೇನಾಧಿಪತಿ ಧೀರಮಲ್ಲನು ಅವರನ್ನು ಅಟಕಾಯಿಸಿದನು. ಸಮಯಸಾಧಿಸಿ ಚಂದ್ರವರ್ಮ ಮತ್ತು ಸುಬಾಹು ಯುದ್ಧರಂಗದಿಂದ ಪರಾರಿಯಾದರು. ಅವರಿಬ್ಬರು ಆ ರೀತಿ ತುಸದೂರ ರಾಜಮಾರ್ಗದಲ್ಲಿ ಹೋಗಿ ತರುವಾಯ ತಮ್ಮ ಕುದುರೆಗಳನ್ನು ದಕ್ಷಿಣದ್ವಾರದಕಡೆ ತಿರುಗಿಸಿದರು. ನಗರದಿಂದ ಹೊರಬೀಳಲು ಬಹುಶಃ ತಮಗೆ ದಕ್ಷಿಣದ್ವಾರವೊಂದೇ ಶರಣೆಂದು






ಚಂದ್ರವರ್ಮನು ಭಾವಿಸಿದನು. ಉಳಿದದ್ವಾರಗಳೆಲ್ಲ ಈವೊದಲೇ ಶತ್ರುವಶವಾಗಿರುವ ಅಂಶ ಅವನಿಗೆ ತಿಳಿದಿತ್ತು.

ದಕ್ಷಿಣದ್ವಾರ ಇನ್ನು ಸ್ವಲ್ಪ ದೂರದಲ್ಲಿರುವಾಗ ಸುಬಾಹು ಚಂದ್ರವರ್ಮರು ತಮ್ಮ ಕುದುರೆಗಳನ್ನು ನಿಲ್ಲಿಸಿದರು. ದ್ವಾರದಬಳಿ ಶತ್ರುಸೈನಿಕರು ಇರುವರೇನೋ ಎಂದು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿದರು. ಅಲ್ಲಿ ಶತ್ರುದಳದ ಸೂಚನೆಗಳೇನೂ ಕಾಣಬರಲಿಲ್ಲ. ಕೆಲವಾರುಜನ ಆ ದ್ವಾರದ ಮೂಲಕ ನಗರದಾಚೆ ಹೋಗುತ್ತಿದ್ದರು. ಐದಾರುಜನ ಶತ್ರುಸೈನಿಕರು ದ್ವಾರದ ಒಂದು ಪಕ್ಕದಲ್ಲಿ ನಿಂತುಕೊಂಡು ತಮ್ಮ ಪಾಡಿಗೆ ಹರಟೆ ಕೊಚ್ಚುತ್ತಿದ್ದರು. ಅವರ ಕುದುರೆಗಳನ್ನು ಕೊಂಚ ದೂರದಲ್ಲಿ ಗೂಟಗಳಿಗೆ ಕಟ್ಟಿ ಹಾಕಲಾಗಿತ್ತು.

"ಯುವರಾಜ, ಸೇನಾಧಿಪತಿ ಧೀರಮಲ್ಲನು ಶತ್ರುಸೈನ್ಯವು ನಮ್ಮನ್ನು ಹಿಂಬಾಲಿಸದಂತೆ ತಡೆಯುತ್ತಿರಬಹುದು. ಆದರೆ ಅವನಬಳಿಯಿರುವ ಬಲದಿಂದ ಬಹಳ ಹೊತ್ತು ಶತ್ರುಗಳನ್ನು ತಡೆಗಟ್ಟುವುದು ಅಸಾಧ್ಯ. ಆದುದರಿಂದ ನಾವು ಆದಷ್ಟು ಶೀಘ್ರವಾಗಿ ನಗರದಿಂದ ಹೊರಬೀಳಬೇಕು. ಕುದುರೆಯನ್ನು ಒಮ್ಮಿಂದೊಮ್ಮೆಗೇ ನಾಗಾಲೋಟದಿಂದ ಓಡಿಸೋಣವಾಗಲಿ" ಎಂದನು ಸುಬಾಹು.

ಚಂದ್ರವರ್ಮನು ಅವನ ಸಲಹೆಗೆ ತಲೆದೂಗಿ ಕುದುರೆಯನ್ನು ಎಚ್ಚರಿಸಿದನು. ಅದೇ ಸಮಯದಲ್ಲಿ ದ್ವಾರದಬಳಿ ನಿಂತು ಹರಟೆ ಹೊಡೆಯುತ್ತಿದ್ದ ಶತ್ರುಪಕ್ಷದ ಸೈನಿಕರ ದೃಷ್ಟಿ ಅವರಮೇಲೆ ಬಿತ್ತು. ಅವರು ಬೆಚ್ಚಿಬಿದ್ದು ಒರೆಯಿಂದ ತಮ್ಮ ಖಡ್ಗಗಳನ್ನು ಹೊರತೆಗೆದು 'ಹೇಯ್' ಎಂದು ಕೂಗುತ್ತಾ ತಮ್ಮ ಅಶ್ವಗಳಿದ್ದಕಡೆ ಓಡಿದರು.

"ಸುಬಾಹು, ನಾವು ಕೂಡಲೇ ದ್ವಾರವನ್ನು ದಾಟಿ ಹೋಗಬೇಕು. ಕುದುರೆಗಳನ್ನು ವೇಗವಾಗಿ ಓಡಿಸು. ನಿನಗೆ ಎದುರಾಗಿ ಬರುವ ಶತ್ರುಗಳನ್ನು ತುಂಡರಿಸಿ ಚೆಲ್ಲು" ಎಂದು ಹೇಳಿ ಚಂದ್ರವರ್ಮನು ತನ್ನ ಅಶ್ವವನ್ನು ದ್ವಾರದಕಡೆ ನುಗ್ಗಿಸಿದನು.

ಶತ್ರುಸೈನಿಕರಲ್ಲಿ ಮೂವರು ತಮ್ಮ ಕುದುರೆಗಳ ಬಳಿಗೋಡಿ ಅವುಗಳನ್ನು ಗೂಟಗಳಿಂದ ಬಿಚ್ಚುತ್ತಿರಲು ಉಳಿದಿಬ್ಬರು ದಾರಿಗೆ ಅಡ್ಡ





ವಾಗಿ ಬಂದು "ನಿಲ್ಲಿ, ನಿಲ್ಲಿ, ಮುಂದೆ ಬಂದರೆ ನಿಮ್ಮ ಜೀವ ಉಳಿಯಲಿಕ್ಕಿಲ್ಲ" ಎಂದು ಕತ್ತಿ ಹಿರಿದು ನಿಂತರು.

"ಅಹ್ಹಹ್ಹಾ! ಯಾರ ಪ್ರಾಣ ಉಳಿಯುವುದಿಲ್ಲವೋ ನೋಡೋಣ" ಎಂದು ಸುಬಾಹು ವೇಗವಾಗಿ ಓಡುತ್ತಿದ್ದ ತನ್ನ ಕುದುರೆಯ ಮೇಲಿಂದ ಒಂದು ಪಕ್ಕಕ್ಕೆ ಬಾಗಿ ಒಬ್ಬ ಸೈನಿಕನ ತಲೆ ಹಾರಿಸಿದನು. ಚಂದ್ರವರ್ಮನು ತನ್ನ ಖಡ್ಗವನ್ನು ಮತ್ತೊಬ್ಬನಮೇಲೆ ಬೀಸುವಷ್ಟರಲ್ಲಿ ಆ ಶತ್ರುಸೈನಿಕನು ತಟಕ್ಕನೆ ನೆಲದ ಮೇಲೆ ಬೋರಲು ಬಿದ್ದನು.

ಇಷ್ಟರಲ್ಲಿ ಶತ್ರುಸೈನಿಕರು ತಮ್ಮ ಕುದುರೆಗಳನ್ನು ಹತ್ತಿ, ಸುಬಾಹು ಚಂದ್ರವರ್ಮರನ್ನು ಹಿಂಬಾಲಿಸಿದರು. ಚಂದ್ರವರ್ಮನು ಹಿಂತಿ



ರುಗಿ ಸಹ ನೋಡದೆ ತನ್ನ ಕುದುರೆಯನ್ನು ವೇಗವಾಗಿ ನಿರಾತಂಕವಾಗಿದ್ದ ದಾರಿಯಲ್ಲಿ ಒಂದೇಸವನೆ ಓಡಿಸಿದನು.

ಮುಂದೆ ಚಂದ್ರವರ್ಮನೂ, ಸ್ವಲ್ಪ ಹಿಂದೆ ಸುಬಾಹುವೂ ತಮ್ಮ ಕುದುರೆಗಳನ್ನು ವೇಗವಾಗಿ ಓಡಿಸುತ್ತಿದ್ದರು. ಅವರಿಗೆ ಸುಮಾರು ದೂರದಲ್ಲಿ ನಾಲ್ವರು ಶತ್ರುಪಕ್ಷದ ಸವಾರರು ರಣಧ್ವನಿಗೈಯುತ್ತ ಬರುತ್ತಿದ್ದರು. "ಯುವರಾಜ, ನಾವು ಒಂದೆಡೆ ನಿಂತು ಈ ಸವಾರರನ್ನು ಮುಗಿಸುವುದು ಉತ್ತಮವೆನಿಸುತ್ತದೆ. ಇವರು ನಮ್ಮನ್ನು ಬಿಡುವಂತೆ ತೋರದು" ಎಂದ ಸುಬಾಹು.

"ನಾವು ಈಗ ನಿಲ್ಲುವುದು ತುಂಬಾ ಅಪಾಯಕರ. ಈ ವೇಳೆಗೆ ನಾವು ನಗರದಿಂದ ಪರಾರಿಯಾದ ವಿಷಯ ಸರ್ಪಕೇತನ ಕಿವಿಗೆ ಬಿದ್ದಿರಬೇಕು. ಅವನು ಖಂಡಿತವಾಗಿ ನಮ್ಮನ್ನು ಬೇಟೆಯಾಡಲು ಭಾರಿ ಸೈನ್ಯದೊಂದಿಗೆ ಬರುತ್ತಾನೆ. ಇವರು ನಮ್ಮನ್ನು ಹಿಂಬಾಲಿಸಲಿ. ಅದೇ ಅಲ್ಲಿ ಕಾಣಿಸುವ ಬೆಟ್ಟದ ತೀರವನ್ನು ಸೇರಿದ ಕೂಡಲೇ ಅವರನ್ನು ಎದುರಿಸೋಣ" ಎಂದು ಚಂದ್ರವರ್ಮನು ಹೇಳಿದನು.

ಚಂದ್ರವರ್ಮನು ಮಾತು ಮುಗಿಸುವಮುನ್ನರಿನ್ನನೆ ಒಂದು ಬಾಣ ಅವನ ಬಲಭುಜವನ್ನು ತಾಕಿಕೊಂಡು ಹೋಗಿ ನೆಲಕ್ಕೆ ಚುಚ್ಚಿಕೊಂಡಿತು. "ಸುಬಾಹು" ಎಂದು ಚಂದ್ರವರ್ಮನು ಗಟ್ಟಿಯಾಗಿ ಕೂಗಿ, ಮುಂದಕ್ಕೆ ಬಾಗಿದನು. ಆದರೆ ಕೆಳಗೆ ಬೀಳದಂತೆ ಕುದು





ರೆಯ ಕೊರಳನ್ನು ಬಿಗಿದಪ್ಪಿ ಹಿಡಿದು ಕೊಂಡನು. "ಈತನಕ ನಾನೂ ಜೀವದಿಂದಿದ್ದೇನೆ, ಯುವರಾಜ" ಎಂದು ಹೇಳಿ ಸುಬಾಹು ಸಹ ಕುದುರೆಯ ಜೂಲಿನಮೇಲೆ ಬಾಗಿ ಒಮ್ಮೆ ತಲೆಯನ್ನು ಹಿಂದಕ್ಕೆ ತಿರುಗಿಸಿ ನೋಡಿದನು. ಶತ್ರುಸವಾರರಲ್ಲೊಬ್ಬನು ಬಿಲ್ಲು ಬಾಣಗಳನ್ನು ಎರಡು ಕೈಗಳಲ್ಲಿ ಹಿಡಿದು, ಕುದುರೆಯ ಕಡಿವಾಣವನ್ನು ಬಿಗಿಯಾಗಿ ಕಚ್ಚಿಕೊಂಡಿದ್ದನು. ಆ ದೃಶ್ಯನೋಡಿ ಸುಬಾಹು ವಿಸ್ಮಿತನಾದನು. ಅವನಿಗೆ ಭಯವೂ ಆಯಿತು. ಸುಬಾಹು ಸವಾರನ ಸಾಹಸವನ್ನು ಚಂದ್ರವರ್ಮನಿಗೆ ತಿಳಿಸುವಷ್ಟರಲ್ಲಿ ಆ ಅಶ್ವಿಕನು ಹತ್ತಿದ್ದ ಕುದುರೆಯ ಕಾಲು ಒಂದು ಕಲ್ಲಿಗೆ ತಾಕಿ ಕ್ಷಣಮಾತ್ರದಲ್ಲಿ ಒಂದು ಪಕ್ಕಕ್ಕೆ ಒರಗಿತು. ಅದೇ ಕ್ಷಣ ಹಿಂದಿನಿಂದ ವೇಗವಾಗಿ ಬರುತ್ತಿದ್ದ ಕುದುರೆಗಳಲ್ಲಿ ಒಂದು ಅದನ್ನು ಬಲವಾಗಿ ತಳ್ಳಿಕೊಂಡು ಮುನ್ನುಗ್ಗಿತು. ಬಿಲ್ಲುಬಾಣಗಳನ್ನು ಹಿಡಿದಿದ್ದ ಸೈನಿಕನು ಅದರ ರಭಸಕ್ಕೆ ತಳ್ಳಲ್ಪಟ್ಟು ಕಿಟಾರನೆ ಕಿರುಚುತ್ತ ಕೆಳಗೆ ಉರುಳಿಬಿದ್ದನು. ಅವನನ್ನು ತುಳಿದುಕೊಂಡು ಉಳಿದ ಕುದುರೆಗಳು ಮುಂದಕ್ಕೆ ಓಡಿದವು.

ಸುಬಾಹು ಆನಂದೋತ್ಸಾಹದಿಂದ ಕೂಗು ಹಾಕಿ ಕುದುರೆಯಮೇಲೆ ನಿರಾರನೆ ಕುಳಿತನು. ಉಳಿದ ಶತ್ರುಸವಾರರು ತಮ್ಮ ಬೆನ್ನು ಹತ್ತುವುದನ್ನು ಬಿಟ್ಟು, ಅಪಘಾತಕ್ಕೀಡಾದ ತಮ್ಮ ಸಂಗಡಿಗನಿಗೆ ಸಹಾಯಮಾಡಲು ನಿಲ್ಲುವರೆಂದು ಭಾವಿಸಿದ್ದ ಸುಬಾಹುವಿನ ಎಣಿಕೆ ತಪ್ಪಾಯಿತು. ಆ ಸವಾರರಲ್ಲಿ ಯಾರೂ ಅನಾಹುತಕ್ಕೆ ಗುರಿಯಾದ ತಮ್ಮ ಸಂಗಡಿಗನ ಕಡೆ ಗಮನಕೊಡದೆ, ತಮ್ಮ ಕುದುರೆಗಳನ್ನು ಯಥಾರೀತಿ ವೇಗವಾಗಿ ಓಡಿಸಿಕೊಂಡು ಬರುತ್ತಿದ್ದರು. ಆದರೆ ಅವರಲ್ಲಿ ಯಾರೂ ಧನುರ್ಧಾರಿ ಇಲ್ಲವೆಂದು ತಿಳಿದು ಸುಬಾಹು ಸಂತೋಷಗೊಂಡನು.

"ಯುವರಾಜ, ಶತ್ರುಸವಾರರಲ್ಲಿ ಬಿಲ್ಲುಗಾರರಿಲ್ಲ. ಇದ್ದೊಬ್ಬ ಬಿಲ್ಲುಗಾರನು ಅವನ ಸಂಗಡಿಗರ ಕುದುರೆಗಳ ಕಾಲುಗಳ ಕೆಳಗೆ ಸಿಕ್ಕಿ ಸತ್ತುಹೋದನು. ಈಗ ನಮ್ಮನ್ನು ಮೂವರುಮಾತ್ರ ಅಟ್ಟಿಸಿಕೊಂಡು ಬರುತ್ತಿದ್ದಾರೆ. ಅವರ ಬಳಿ ಖಡ್ಗ ಹೊರತು ಮತ್ತಾವ ಆಯುಧವೂ ಇರುವುದಿಲ್ಲ. ಆದುದ



ರಿಂದ ಈಗ ನಾವು ಅವರನ್ನು ಎದುರಿಸಿ, ಯಮಪುರಿಗೆ ಕಳುಹಿಸುವುದು ಉತ್ತಮ" ಎಂದ ಸುಬಾಹು.

ಚಂದ್ರವರ್ಮನು ಹಿಂತಿರುಗಿ ನೋಡಿದನು. ಶತ್ರುಸೈನಿಕರು ಮೂವರುಮಾತ್ರವಿದ್ದರು. ಅವರನ್ನು ಕೊಲ್ಲುವುದೇನೋ ಕಷ್ಟಕರವಾದ ಕಾರ್ಯವಲ್ಲ. ಆದರೆ ಅಲ್ಲಿಗೆ ಮತ್ತಿಷ್ಟು ಜನ ಸೈನಿಕರು ಬಂದರೆ ತಮ್ಮಪಾಡು ನಾಯಿಯ ಪಾಡಾಗುವುದಂತೂ ಖಂಡಿತ. ಹೀಗೆಂದು ಯೋಚಿಸಿ ತನ್ನ ಕುದುರೆಯ ವೇಗವನ್ನು ತುಸ ಕಡಿಮೆಮಾಡಿ, ದಾರಿಯ ಪಕ್ಕದಲ್ಲಿ ನಿಲ್ಲಿಸಿದನು. ಸುಬಾಹುಸಹ ಅಲ್ಲಿಗೆ ಬಂದು ತನ್ನ ಕುದುರೆಯನ್ನು ನಿಲ್ಲಿಸಿದನು. ಅದನ್ನು ಕಂಡ ಕೂಡಲೇ ಹಿಂಬಾಲಿಸುತ್ತಿದ್ದ ಆ ಮೂವರು ಶತ್ರುಸೈನಿಕರು ಸಹ ತಮ್ಮ ಕುದುರೆಗಳನ್ನು ಮಾರ್ಗಮಧ್ಯೆ ನಿಲ್ಲಿಸಿ, ಚಂದ್ರವರ್ಮ ಸುಬಾಹುಗಳಕಡೆ ನೋಡಿ ಏನೋ ರಹಸ್ಯವಾಗಿ ಸಂಭಾಷಿಸಿಕೊಳ್ಳುತ್ತಿದ್ದರು.

"ಯುವರಾಜ, ಆ ಧೂರ್ತರು ನಮ್ಮೊಂದಿಗೆ ಹೋರಾಡಲು ಹೆದರುತ್ತಿದ್ದಾರೆ. ಅವರು ಮುಂದೆ ಬರುವಂತಿಲ್ಲ. ನಾವೇ ಹೋಗಿ ಅವರ ಮೇಲೆ ಬೀಳುವುದು ಉತ್ತಮವೆಂದು ತೋರುತ್ತಿದೆ" ಎಂದ ಸುಬಾಹು.

ಚಂದ್ರವರ್ಮನು ಸವಾರರಕಡೆ ಕ್ಷಣಕಾಲ ದೃಷ್ಟಿಸಿ ನೋಡಿ "ಸರಿ, ಸುಬಾಹು, ನಾವೀಗ ತಡಮಾಡಬಾರದು. ಅವರನ್ನು ಕಳುಹಿಸಬೇಕಾದ್ದೇ ಖಂಡಿತವಾದರೆ ಬೇಗ ಪರಲೋಕಕ್ಕೆ ಕಳುಹಿಸುವುದು ಒಳ್ಳೆಯದು. ತಡವಾದರೆ ಮತ್ತೊಂದು ಶತ್ರುಸಂಗಡವು ಇಲ್ಲಿಗೆ ಬರಬಹುದು" ಎಂದು ಕುದುರೆಯನ್ನು ಶತ್ರುಗಳಕಡೆಗೆ ರಭಸದಿಂದ ಓಡಿಸಿದನು.

ಸುಬಾಹು ಚಂದ್ರವರ್ಮರು ತಮ್ಮಕಡೆ ಬರುತಿರುವುದನ್ನು ಕಂಡು ಆ ಸೈನಿಕರು ತಮ್ಮ ಕುದುರೆಗಳನ್ನು ಪಕ್ಕನೆ ಹಿಂದಕ್ಕೆ ತಿರುಗಿಸಿ, ನಗರದತ್ತ ಓಡಿಸಿದರು.

ಚಂದ್ರವರ್ಮನು ಚಬುಕದಿಂದ ಮೆಲ್ಲನೆ ತನ್ನ ಕುದುರೆಗೆ ಒಂದೇಟು ಕೊಟ್ಟನು. ಕೂಡಲೇ ಒಡೆಯನ ಸಂಜ್ಞೆಯನ್ನರಿತ ಆ ಪ್ರಾಣಿ ವಾಯುವೇಗದಿಂದ ಓಡಲಾರಂಭಿಸಿತು. ಸರ್ಪಕೇತನ ಸೈನಿಕರೂಸಹ ತಮ್ಮ ಕುದುರೆಗಳನ್ನುಅತಿವೇಗವಾಗಿ ಓಡಿಸುತ್ತಿದ್ದರು.







ಶತ್ರುಗಳನ್ನು ಅಟ್ಟಿಸಿಕೊಂಡು ಸುಬಾಹು ಚಂದ್ರವರ್ಮರು ಸುಮಾರುದೂರ ನಗರದಕಡೆ ಹೋದರು. ಹಠಾತ್ತನೆ ಅವರಿಗೆ ನಗರ ದ್ವಾರ ದಿಂದ ತಮ್ಮೆಡೆಗೆ ಧಾವಿಸಿ ಬರುತ್ತಿದ್ದ ಕೆಲವು ರಾಹುತರು ಕಾಣಿಸಿದರು.

ಚಂದ್ರವರ್ಮನು ಅವರನ್ನು ಕಂಡ ಕೂಡಲೇ ಕುದುರೆಯನ್ನು ಹಿಂದಕ್ಕೆ ತಿರುಗಿಸಿ "ಸುಬಾಹು, ಶತ್ರುಗಳ ಹಂಚಿಕೆ ಅರ್ಥವಾಯಿ ತಲ್ಲವೇ? ಇನ್ನು ನಾವು ಇಲ್ಲಿಂದ ಪಲಾಯನ ಮಾಡುವುದೊಂದೇ ಮಾರ್ಗ. ನಾವು ಈ ಮೂವರನ್ನು ಸಂಧಿಸುವಷ್ಟರಲ್ಲಿ ಭಾರಿ ಶತ್ರು ದಳವು ಓಡಿಬಂದು ನಮ್ಮನ್ನು ಸುತ್ತು ಗಟ್ಟುತ್ತದೆ" ಎಂದನು.

ಸುಬಾಹು ಚಂದ್ರವರ್ಮರು ಕುದುರೆ ಗಳನ್ನು ಹಿಂದಕ್ಕೆ ತಿರುಗಿಸಿ ಪಲಾಯನ ಮಾಡಲುದ್ಯುಕ್ತವಾಗುವಷ್ಟರಲ್ಲಿ ಆ ಮೂವರು ಶತ್ರುಸೈನಿಕರು ತಮ್ಮ ಕುದುರೆಗಳನ್ನು ಪಕ್ಕನೆ ಹಿಂದಕ್ಕೆ ತಿರುಗಿಸಿ ಅವರ ಹಿಂದೆಬಿದ್ದರು. ಕ್ರಮೇಣ ಶತ್ರುಪಕ್ಷದ ಸೈನಿಕರ ಮತ್ತು ಸುಬಾಹು ಚಂದ್ರವರ್ಮರ ನಡುವಿನ ಅಂತರ ಕಡಿಮೆಯಾಗುತಿತ್ತು.

"ಯುವರಾಜ, ನಾವು ಈ ಬಾರಿ ನಿಜ ವಾಗಿ ಆಪತ್ತಿನಲ್ಲಿ ಸಿಲುಕಿಕೊಂಡೆವು" ಎಂದು ಸುಬಾಹು ನಿಡುಸುಯ್ದನು.

ಚಂದ್ರವರ್ಮನೇನೂ ಜವಾಬು ಕೊಡಲಿಲ್ಲ. ತನ್ನ ಹಿಂದೆ ಬರುವಂತೆ ಸುಬಾಹುಗೆ ಸನ್ನೆ ಮಾಡಿದನು. ಪಲಾಯನ ಮಾಡುತ್ತಿದ್ದ ಮತ್ತು



ಅಟ್ಟಿಸಿಕೊಂಡು ಹೋಗುತ್ತಿದ್ದ ಸವಾರರು ತಾವು ಹೋಗುತ್ತಿದ್ದ ಮಾರ್ಗದಕಡೆ ಗಮನ ಕೊಟ್ಟರಲಿಲ್ಲ. ಅವರು ದಾರಿಯಿದ್ದಹಾಗೆ ಓಡುತ್ತ ಓಡುತ್ತ ಮಾರ್ಗದ ಇಕ್ಕಡೆಗಳಲ್ಲೂ ಇದ್ದ ಪೊದೆ ಮತ್ತು ಗುಡ್ಡಗಳನ್ನು ದಾಟಿ ಒಂದು ಬೆಟ್ಟದದಾರಿಯನ್ನು ಹಿಡಿದರು.

ಚಂದ್ರವರ್ಮ, ಸುಬಾಹು ಹತ್ತಿದ್ದ ಕುದುರೆಗಳು ತುಂಬಾ ಆಯಾಸಗೊಂಡಿದ್ದುವು. ಅವು ಇನ್ನು ಬಹಳ ಹೊತ್ತು ತಮ್ಮನ್ನು ಹೊರಲಾರದೆಂದು ಚಂದ್ರವರ್ಮನು ಗ್ರಹಿ ಸಿದನು. ಅವನ ದೃಷ್ಟಿ ಶತ್ರುಗಳ ಕಡೆ ಹೊರ ಳಿತು. ಅವರು ಹತ್ತಿದ್ದ ಅಶ್ವಗಳೂ ಸಹ ದಣಿ ದಿದ್ದುವು. ಬಾಯಿಂದ ನೊರೆ ಬರುತಿತ್ತು. ಅವನು ಬೆಟ್ಟದ ತಪ್ಪಲಿನತ್ತ ನೋಡಿದನು.



ಸುಮಾರು ದೂರದಲ್ಲಿ ಹತು ಹನ್ನೆರಡು ಶತ್ರು ಪಕ್ಷದ ಸವಾರರು ಅವರ ಕಡೆ ಬರುತ್ತಿದ್ದರು.

"ಸುಬಾಹು, ಇನ್ನು ನಾವು ಈ ಕುದುರೆಗಳನ್ನು ನಂಬಿದರೆ ಪ್ರಯೋಜನವಿಲ್ಲ. ಇವು ಯಾವಗಳಿಗೆಯಲ್ಲೊ ಪ್ರಾಣ ಬಿಡಬಹುದು. ನಾವು ಕಾಲಿಗೆ ಬುದ್ಧಿ ಹೇಳುವುದೇ ಉತ್ತಮ." ಎಂದು ಹೇಳಿ ಚಂದ್ರವರ್ಮನು ಕುದುರೆಯಿಂದ ಕೆಳಕ್ಕೆ ಇಳಿದನು. ಅದೇ ಕ್ಷಣದಲ್ಲಿ ಶತ್ರುಸೈನಿಕರು ಸಿಂಹನಾದ ಮಾಡುತ್ತ ತಮ್ಮ ಕುದುರೆಗಳಿಂದಿಳಿದು ಸುಬಾಹು ಚಂದ್ರವರ್ಮರಕಡೆ ಓಡಿದರು.

ಚಂದ್ರವರ್ಮನು ಸುತ್ತಲೂ ಒಮ್ಮೆ ದೃಷ್ಟಿ ಹೊರಳಿಸಿದನು. ಬೆಟ್ಟದಮೇಲೆ ಇಳಿಜಾರಾಗಿದ್ದ ಕಡೆ ಓಡಿ, ಅಲ್ಲಿದ್ದ ಬಂಡೆಗಳ ಮತ್ತು ಕುರುಚಲು ಗಿಡಗಳ ಸಹಾಯದಿಂದ ಮೆಲ್ಲನೆ ಕೆಳಗಿಳಿಯಲಾರಂಭಿಸಿದನು. ಅವನನ್ನು ಅನುಸರಿಸಿದ ಸುಬಾಹು.

ಇಬ್ಬರೂ ಬಹು ಎಚ್ಚರಿಕೆಯಿಂದ ಕೆಳಗಿಳಿಯುತ್ತಿರಲು, ಶತ್ರುಸೈನಿಕರು ಇಳಿಜಾರಾಗಿದ್ದ ಪ್ರದೇಶದಲ್ಲಿ ಕಾಣಿಸಿಕೊಂಡರು.

ಅವರಲ್ಲೊಬ್ಬನು "ನಾವು ಅವರನ್ನು ಅನುಸರಿಸಿಕೊಂಡು ಹೋಗುವುದು ಅಪಾಯಕರ. ಸ್ವಲ್ಪ ವ್ಯತ್ಯಾಸವಾದರೆ ಕೆಳಗಿರುವ ಕಂದಕದಲ್ಲಿ ಬೀಳುತ್ತೇವೆ. ಇಲ್ಲೇ ನಿಂತು ಅವರ ಕಡೆ ಬಂಡೆಗಳನ್ನು ಉರುಳಿಸುವುದು ಉತ್ತಮ" ಎಂದು ಗಟ್ಟಿಯಾಗಿ ಕೂಗಿಕೊಂಡನು. ಕೂಡಲೇ ಮೇಲಿನಿಂದ ಕಲ್ಲು ಬಂಡೆಗಳು ಸುಬಾಹು ಚಂದ್ರವರ್ಮರ ಕಡೆ ಉರುಳಿಕೊಂಡು ಬರಲಾರಂಭಿಸಿದುವು. ಅಂತಕನೇ ತಮ್ಮ ಸುತ್ತಲೂ ನರ್ತಿಸುವಂತೆ ತೋರಿತು. ಎರಡು ಕಣ್ಣುಗಳನ್ನು ಹತ್ತಾಗಿ ಮಾಡಿಕೊಂಡು, ಆ ಬಂಡೆಗಳ ಓಟವನ್ನು ತಪ್ಪಿಸಿಕೊಳ್ಳುತ್ತ ಸುಬಾಹು ಚಂದ್ರವರ್ಮರು ಕಡೆಗೊಮ್ಮೆ ಅಗಾಧವಾದ ಅಂಚನ್ನು ಸೇರಿಕೊಂಡರು. ಚಂದ್ರವರ್ಮನು ಮೇಲೆ ನಿಂತಿದ್ದ ಶತ್ರುಗಳ ಕಡೆ ನೋಡಿ "ಸುಬಾಹು, ನಮಗೆ ಬೇರೆ ಮಾರ್ಗವೇ ಇಲ್ಲ. ನಿನಗೆ ಈಜಲು ಬರುವುದಷ್ಟೇ." ಎಂದು ಹೇಳಿ ಉಕ್ಕಿ ಹರಿಯುತ್ತಿದ್ದ ನದಿಗೆ ಹಾರಿದನು.

[ಇನ್ನೂ ಇದೆ]





# ಸೇವಕನ ಅದೃಷ್ಟ

ಮಹಮದ್ ಇಬಿನ್ ಪೈಲಾಸ್ ಈಜಿಪ್ಟ್ ದೇಶದ ಕಾಲಿಫ್ ಆಗಿದ್ದನು. ಅವನು ತುಂಬಾ ಸಾಧುಶೀಲನು. ಸಿಂಹಾಸನಕ್ಕೆ ಬಂದಕೂಡಲೇ ತನ್ನ ತಂದೆ ಮಾಡಿದ್ದ ಅಕ್ರಮಗಳನ್ನೆಲ್ಲಾ ತಿದ್ದಿಸರಿಪಡಿಸಿ ದೇಶದಲ್ಲಿದ್ದ ಅರಾಜಕತೆಯನ್ನು ನಿರ್ಮೂಲ ಮಾಡಿದನು.

ಒಂದು ದಿನ ಕಾಲಿಫ್ ಪೈಲಾಸ್ ತನ್ನ ಆಸ್ಥಾನದಲ್ಲಿರುವ ಉದ್ಯೋಗಿಗಳ ಸಂಬಳ ಸಾರಿಗೆಗಳಬಗ್ಗೆ ಪರಿಶೀಲನೆ ಮಾಡುತ್ತಿದ್ದನು. ಎಲ್ಲ ದರ್ಜೆಯ ನೌಕರರ ಕೆಲಸಕಾರ್ಯಗಳನ್ನೂ, ಸಂಬಳಸಾರಿಗೆಗಳನ್ನೂ ವಿಮರ್ಶಿಸಿದ ನಂತರ ಒಬ್ಬ ವೃದ್ಧನುಮಾತ್ರ ಉಳಿದುಕೊಂಡನು. "ತಾತ, ನೀನೇನು ಕೆಲಸ ಮಾಡುತ್ತಿರುವೆ? ನಿನ್ನ ಸಂಬಳವೆಷ್ಟು?" ಎಂದು ಕಾಲಿಫ್ ಕೇಳಿದನು.

"ಕೀರ್ತಿಶೇಷರಾದ ನಿಮ್ಮ ತಂದೆಯವರು ಸಣ್ಣದೊಂದು ಸಂದುಕವನ್ನು ನೋಡಿಕೊಳ್ಳುವ ಕಾರ್ಯವನ್ನು ನನಗೊಪ್ಪಿಸಿದ್ದರು. ನನಗೆ ತಿಂಗಳಿಗೆ ಹತ್ತು ದೀನಾರಗಳನ್ನು ಕೊಡುತ್ತಿದ್ದಾರೆ" ಎಂದು ಉತ್ತರ ಹೇಳಿದ ವೃದ್ಧ.

"ಆಮಾತ್ರ ಕೆಲಸಕ್ಕೆ ಅಷ್ಟೊಂದು ಸಂಬಳವೇ? ಆ ಪೆಟ್ಟಿಗೆಯಲ್ಲಿರುವುದಾದರೂ ಏನು?" ಕಾಲಿಫ್ ಕೇಳಿದನು.

"ಅಯ್ಯಾ, ಅದನ್ನು ನಾನು ನಲವತ್ತು ವರ್ಷಗಳಿಂದ ಕಾಪಾಡಿಕೊಂಡು ಬಂದಿದ್ದೇನೆ. ಆದರೆ ಅದರಲ್ಲಿ ಏನಿದೆಯೋ ನಾನರಿಯೆ" ಎಂದು ವೃದ್ಧನು ಉತ್ತರಕೊಟ್ಟನು.

ಕಾಲಿಫ್ ಪೆಟ್ಟಿಗೆಯನ್ನು ತರಿಸಿ ತೆರೆಸಿ ನೋಡಿದನು. ಅದರಲ್ಲಿ ಕೆಂಪುಬಣ್ಣದ ಚೂರ್ಣ ಮತ್ತು ಒಂದು ತುಂಡು ಚರ್ಮ ಕಾಣಿಸಿತು. ಆ ಚರ್ಮದಮೇಲೆ ಏನೋ ಬರೆದಿತ್ತು. ಆಸ್ಥಾನದ ಭಾಷಾಪ್ರವೀಣರು ದೀರ್ಘವಾಗಿ ಸಂಶೋಧನೆ ನಡೆಸಿದರು. ಆ ಪೆಟ್ಟಿಗೆಯ ಒಡೆಯನಾದ ಹಸನ್ ಅಬ್ದುಲ್ಲಾ ಎಂಬಾತ ನನ್ನು ಈಗಿರುವ ಕಲಿಫಾರವರ ತಂದೆ ಸೆರೆಮನೆಯಲ್ಲಿಟ್ಟಿರುವುದಾಗಿ ಅವರಿಗೆ ತಿಳಿದುಬಂತು.

ನಲವತ್ತು ವರ್ಷ ಸೆರೆಮನೆಯ ವಾಸವನ್ನು ಅನುಭವಿಸಿ ವೃದ್ಧನಾಗಿದ್ದ ಹಸನ್ ಅಬ್ದುಲ್ಲಾ

ಬಿ. ಬಾಬುರಾವು




ನನ್ನು ಬಿಡುಗಡೆಮಾಡಲಾಯಿತು. ಅವನಿಗೆ ಸೆರೆಮನೆಯ ಅಧಿಕಾರಿಗಳು ಉತ್ತಮವಾದ ಬಟ್ಟೆಗಳನ್ನು ಕೊಟ್ಟರು. ಕಾಲಿಫ್ ಮಂದ ಹಾಸ ಬೀರುತ್ತಾ ಅವನನ್ನು ಸ್ವಾಗತಿಸಿ, "ಹಸನ್ ಅಬ್ದುಲ್ಲಾ, ಈ ಸಂದುಕ ನಿನ್ನ ಸೊತ್ತೆಂದು ತಿಳಿಯಿತು. ಅದನ್ನು ನಿನಗೀಗ ಕೊಡುತ್ತಿದ್ದೇನೆ, ಸ್ವೀಕರಿಸು" ಎಂದು ಪೆಟ್ಟಿಗೆಯನ್ನು ಅವನಮುಂದೆ ಹಿಡಿದನು.

ಹಸನ್ ಅಬ್ದುಲ್ಲಾ ಆನಂದಾಶ್ರುಗಳನ್ನು ಸುರಿಸುತ್ತಾ "ಮಹಾಪ್ರಭು, ನಿಮ್ಮ ತಂದೆಯವರು ಬಲಾತ್ಕಾರವಾಗಿ ನನ್ನಿಂದ ಕಸಿದುಕೊಂಡ ಆ ಪೆಟ್ಟಿಗೆಯನ್ನು ಈಗ ನಾನಾಗಿ ನಿಮಗೆ ಕೊಡಲಿಚ್ಛಿಸುತ್ತೇನೆ. ದಯವಿಟ್ಟು ಸ್ವೀಕರಿಸಬೇಕೆಂದು ಈ ಬಡವನ ಪ್ರಾರ್ಥನೆ" ಎಂದು ಕೇಳಿಕೊಂಡನು. ಆ ಸಂದುಕದ ಸಂಗತಿಯನ್ನು ವಿಸ್ತಾರವಾಗಿ ವಿವರಿಸಿ ಹೇಳುವಂತೆ ಕೇಳಲು, ಅವನು ಈ ರೀತಿ ಹೇಳಲಾರಂಭಿಸಿದನು :

"ಕೈರೋ ನಗರದಲ್ಲಿದ್ದ ವರ್ತಕರಲ್ಲೆಲ್ಲಾ ನನ್ನ ತಂದೆ ಅತ್ಯಂತ ಸಿರಿವಂತರಾಗಿದ್ದರು. ನಾನು ಅವರ ಏಕೈಕ ಪುತ್ರ. ಆದುದರಿಂದ ಅವರು ನನಗೆ ಪಂಡಿತರಿಂದ ಪಾಠ ಹೇಳಿಸಿ ವಿದ್ಯಾವಂತನನ್ನಾಗಿ ಮಾಡಿದರು. ಪ್ರಾಪ್ತ ವಯಸ್ಸಿಗೆ ಬಂದಕೂಡಲೇ ಉತ್ತಮ ಕುಟುಂಬದ ಹೆಣ್ಣನ್ನು ತಂದು ನನಗೆ ಮದುವೆಮಾಡಿದರು. ಆಕೆಯೊಂದಿಗೆ ನಾನು ಹತ್ತು ವರ್ಷ ಸುಖವಾಗಿ ಸಂಸಾರಮಾಡಿಕೊಂಡಿದ್ದೆ.

ಆ ತರುವಾಯ ಪ್ರಪಂಚದಲ್ಲಿರುವ ಕಷ್ಟಗಳೆಲ್ಲಾ ಒಮ್ಮೆಗೇ ನನ್ನಮೇಲೆರಗಿತು. ನನ್ನ ತಂದೆ ಪ್ಲೇಗ್‌ಮಾರಿಗೆ ಬಲಿಯಾದರು. ಮನೆಗೆ ಬೆಂಕಿಬಿತ್ತು. ನಮ್ಮ ನೌಕೆಗಳೆಲ್ಲಾ ಸಮುದ್ರದಲ್ಲಿ ಮುಳುಗಿಹೋದುವು. ಸಕಲೈಶ್ವರ್ಯವನ್ನೂ ಕಳೆದು ಕೊಂಡು ತಿರುಪೆಬೇಡಿ ಜೀವಿಸುವ ಸ್ಥಿತಿಗೆ ನಾನಿಳಿದೆ. ಅಂತಹ ಪರಿಸ್ಥಿತಿಯಲ್ಲಿ ಒಂದು ದಿನ ನನ್ನ ಪತ್ನಿ ತನ್ನಬಳಿಯಿದ್ದ ಅಂಗಿಯನ್ನು ನನ್ನ ಕೈಗಿತ್ತು "ಇದನ್ನು ಮಾರಿ, ಬಂದ ಹಣದಿಂದ ಮಕ್ಕಳಿಗೆ ರೊಟ್ಟಿ ತೆಗೆದುಕೊಂಡು ಬನ್ನಿ, ಮಕ್ಕಳು ಹಸಿವಿನಿಂದ ಸಾಯುತ್ತಿವೆ" ಎಂದಳು.

ನಾನು ನನ್ನ ಹೆಂಡತಿಯ ಅರಿವೆಗಳನ್ನು ಮೂಟೆ ಕಟ್ಟಿಕೊಂಡು ಮಾರುಕಟ್ಟೆಯಕಡೆ

ಹೊರಟೆ. ದಾರಿಯಲ್ಲಿ ಒಂಟೆಯಮೇಲೆ ಸವಾರಿಮಾಡಿಕೊಂಡು ಒಬ್ಬ ಫಕೀರನು ಎದುರಾದನು. ಆತನು ನನ್ನನ್ನು ಕಂಡಕೂಡಲೇ ಒಂಟೆಯಮೇಲಿನಿಂದ ಇಳಿದು "ಹಸನ್ ಅಬ್ದುಲ್ಲಾ ಎಂಬ ವರ್ತಕಶ್ರೇಷ್ಠನ ಮನೆಗೆ ದಾರಿ ತೋರಿಸುವಿರಾ?" ಎಂದು ಕೇಳಿದನು.

"ಮಹಾಶಯಾ, ಆ ಹೆಸರಿನ ವರ್ತಕನು ಈ ಕೈರೋ ನಗರದಲ್ಲೇ ಇರುವಂತೆ ಕಾಣಿಸದು" ಎಂದು ಹೇಳಿ ನಾನು ಮುಂದಕ್ಕೆ ಹೆಜ್ಜೆಯಿಟ್ಟೆ. ಆದರೆ ಆತನು ನನ್ನ ಕೈಯನ್ನು ಹಿಡಿದು ನಿಲ್ಲಿಸಿ "ನೀನೇ ಅಲ್ಲವೇ ಹಸನ್ ಅಬ್ದುಲ್ಲಾ. ನಿಜ ಹೇಳು. ಅಲ್ಲಾ ಕಳುಹಿಸಿದ ಅತಿಥಿಯನ್ನು ತಿರಸ್ಕರಿಸುವೆಯಾ?" ಎಂದು ಹಂಗಿಸಿದನು. ನಂತರ ಆತನು ನನ್ನನ್ನು ತನ್ನ ಆಪ್ತನಂತೆ ಆಲಿಂಗಿಸಿ, ನನ್ನೊಂದಿಗೆ ನಮ್ಮ ಮನೆಗೆ ಬಂದನು.

ಆತನು ನನ್ನ ಪರಿಸ್ಥಿತಿಯನ್ನು ಗ್ರಹಿಸಿ, ನನ್ನ ಕೈಯಲ್ಲಿ ಹತ್ತು ಚಿನ್ನದ ನಾಣ್ಯಗಳನ್ನಿಟ್ಟನು. ಆತನು ಸುಮಾರು ಹದಿನೈದು ದಿನಗಳು ನಮ್ಮ ಅತಿಥಿಯಾಗಿ ಉಳಿದುಕೊಂಡನು. ಪ್ರತಿ ದಿನ ಆತನು ನನಗೆ ಹತ್ತು ಚಿನ್ನದ ನಾಣ್ಯಗಳನ್ನು ಕೊಡುತ್ತಿದ್ದನು. ಹದಿನಾರನೇಯ ದಿನ ಆತನು ತಟಕ್ಕನೆ "ಹಸನ್ ನನಗೆ ನಿನ್ನನ್ನು ಮಾರಿಕೊಳ್ಳುವೆಯಾ? ನೀನು ಬೇಡಿದಷ್ಟು ಹಣ ಕೊಡುತ್ತೇನೆ" ಎಂದನು.

ಆತನು ತಮಾಷೆ ಮಾಡುತ್ತಿರುವನೆಂದು ಭಾವಿಸಿ "ಒಂದೇಟಿಗೇ ಸಾಯುವವನ ಬೆಲೆ



ಸಾವಿರ ದೀನಾರಗಳು. ಒಂದೇಟಿಗಿಂತಲೂ ಹೆಚ್ಚು ಏಟು ಬಿದ್ದಹೊರತು ಸಾಯದಾತನಿಗೆ ಸಾವಿರದೈನೂರು ದೀನಾರಗಳಂತೆ. ಈ ವಿಷಯ ಕುರಾನಿನಲ್ಲಿ ಹೇಳಿದೆಯಷ್ಟೆ" ಎಂದು ನಗುತ್ತಾ ಹೇಳಿದೆ. ಹಾಗೆಂದಕೂಡಲೇ ಆತನು ಸಾವಿರದೈನೂರು ದೀನಾರಗಳನ್ನು ಕೊಡಲು ಒಪ್ಪಿಕೊಂಡನು. ಆತನು ಹಣವನ್ನು ಎಣಿಸಿ ಕೊಟ್ಟು "ನೀನು ನನ್ನೊಂದಿಗೆ ಪ್ರಯಾಣಕ್ಕೆ ಹೊರಡಬೇಕು. ನಿನ್ನನ್ನು ಜೊತೆಗಾರನಂತೆ ಕರೆದುಕೊಂಡು ಹೋಗುವೆನೇ ಹೊರತು ಅನ್ಯಥಾ ಅಲ್ಲ. ನಿನ್ನ ಪ್ರಾಣಕ್ಕೆ, ನಿನ್ನ ಸ್ವಾತಂತ್ರ್ಯಕ್ಕೆ ಯಾವುದೇ ವಿಧವಾದ ಧಕ್ಕೆಯುಂಟಾಗದು" ಎಂದು ಒತ್ತಿ ಹೇಳಿದನು. ಹಣವನ್ನು ನನ್ನ ಹೆಂಡತಿಯ ವಶಕ್ಕೆ ಒಪ್ಪಿಸಿದೆ.



ಫಕೀರನ ಕೋರಿಕೆಯಂತೆ ನಾನೊಂದು ಒಂಟೆಯನ್ನು ಕ್ರಯಕ್ಕೆ ತೆಗೆದುಕೊಂಡೆ. ಪ್ರಯಾಣಕ್ಕೆ ಅಗತ್ಯವಾದ ವಸ್ತುಗಳನ್ನೆಲ್ಲಾ ತೆಗೆದುಕೊಂಡು, ಆತನ ಸಂಗಡ ಹೊರಟೆ. ನಾವಿಬ್ಬರೂ ಮಾನವ ಸಂಚಾರವಿಲ್ಲದ ಮಾರ್ಗದಲ್ಲಿ ಹತ್ತು ದಿನ ಪ್ರಯಾಣಮಾಡಿದೆವು. ಹನ್ನೊಂದನೇಯ ದಿನ ಒಂದು ಮೈದಾನ ವನ್ನು ಪ್ರವೇಶಿಸಿದೆವು.

ಆ ಮೈದಾನದ ಮಧ್ಯೆ ಒಂದು ಎತ್ತರ ವಾದ ಶಿಲಾಸ್ತಂಭವಿತ್ತು. ಅದರ ಮೇಲೆ ತಾಮ್ರದಿಂದ ಮಾಡಿದ ಯುವಕನ ವಿಗ್ರಹ ವಿತ್ತು. ಆ ಯುವಕನ ಬಲಗೈ ಚಾಚಿತ್ತು. ಐದು ಬೆರಳುಗಳೂ ಬಿಡಿಬಿಡಿಯಾಗಿ ತೆರೆದು ಕೊಂಡಿದ್ದುವು. ಆ ಐದು ಬೆರಳುಗಳಲ್ಲೂ ಐದು ವಿಧವಾದ ಲೋಹಗಳಿಂದ ಮಾಡಿದ ಬೀಗದ ಕೈಗಳು ನೇತಾಡುತ್ತಿದ್ದುವು. ಅವು ಗಳಲ್ಲಿ ಒಂದು ಚಾವಿ ಚಿನ್ನದ್ದು; ಇನ್ನೊಂದು ಬೆಳ್ಳಿಯದು; ಮತ್ತೊಂದು ಚಾವಿ ತಾಮ್ರ ದ್ದಾದರೆ, ಮಗದೊಂದು ಕಬ್ಬಿಣದ್ದು. ಉಳಿ ದೊಂದು ಚಾವಿ ಸೀಸದ್ದು.

ಫಕೀರನು ಬಿಲ್ಲುಬಾಣಗಳನ್ನು ತೆಗೆದು, ವಿಗ್ರಹಕ್ಕೆ ಗುರಿಯಿಟ್ಟು ಬಾಣಬಿಟ್ಟನು. ಆದರೆ ಬಾಣ ಅಷ್ಟು ಮೇಲಕ್ಕೆ ಹೋಗಲಿಲ್ಲ. ಆಗ ಆತನು ಬಿಲ್ಲನ್ನು ನನಗೆ ಕೊಟ್ಟು ವಿಗ್ರಹದ ಬೆರಳುಗಳಿಗೆ ತಗುಲಿಸಿರುವ ಚಾವಿಗಳನ್ನು ಕೆಡ ಹೆಂದು ಹೇಳಿದನು. ಅದೃಷ್ಟವಶಾತ್ ನಾನು ಮೊದಲನೇ ಬಾಣದಿಂದ ಚಿನ್ನದ ಚಾವಿ ಯನ್ನು ಬೀಳಿಸಿದೆ. ಆ ಬೀಗದ ಕೈಯನ್ನು ಯಜಮಾನನಿಗೆ ಕೊಡಹೋಗಲು, ಆತನು "ಅದು ನಿನ್ನಬಳಿಯೇ ಇರಲಿ" ಎಂದನು. ಆದರಿಂದ ಕಷ್ಟ ಪ್ರಾಪ್ತವಾಗುವುದೆಂಬ ವಿಷಯ ನಾನರಿಯೆ. ಎಂತಲೇ ಅದನ್ನು ಸೊಂಟಕ್ಕೆ ಸಿಕ್ಕಿಸಿಕೊಂಡೆ. ತದನಂತರ ನಾನು ಬೆಳ್ಳಿಯ ಬೀಗದಕೈಯನ್ನು ಕೆಳಗೆ ಕೆಡವಿದೆ. ಅದನ್ನೂ ತೆಗೆದುಕೊಳ್ಳುವಂತೆ ನನಗೆ ಆತನು ಹೇಳಿದನು. ಆ ಬೆಳ್ಳಿಯ ಚಾವಿ ನೋವ ನ್ನುಂಟುಮಾಡುವುದಂತೆ!

ತರುವಾಯ ನಾನು ಕಬ್ಬಿಣದ ಮತ್ತು ಸೀಸದ ಬೀಗದಕೈಗಳನ್ನು ಕೆಳಕ್ಕೆ ಬೀಳಿಸಿದೆ. ಫಕೀರನು ನನ್ನ ಶಕ್ತಿಯನ್ನೂ, ಗುರಿಯನ್ನೂ ಪ್ರಶಂಸಿಸಿ, ಆ ಎರಡು ಬೀಗದ ಕೈಗಳನ್ನು

ತಾನೇ ತೆಗೆದುಕೊಂಡನು. ಅವು ಸುಖ ಮತ್ತು ಜ್ಞಾನವನ್ನು ಪ್ರಸಾದಿಸುವ ಚಾವಿಗಳು. ನಾನು ಮತ್ತೆ ಬಾಣವನ್ನು ತಾಮ್ರದ ಬೀಗದ ಕೈಗೆ ಗುರಿಯಿಟ್ಟು ಹೊಡೆಯಲು ಪ್ರಯತ್ನಿಸುತ್ತಿರುವಲ್ಲಿ ಫಕೀರನು ಪಕ್ಕನೆ ನನ್ನ ಕೈಯಿಂದ ಬಿಲ್ಲನ್ನು ಕಸಿದುಕೊಂಡು "ಎಲಾ, ಮನೆಹಾಳ, ಎಂಥಾ ಕೆಲಸಕ್ಕೆ ಕೈಹಾಕುತ್ತಿ" ಎಂದನು. ಆತನು ನನ್ನ ಕೈಯಿಂದ ಬಿಲ್ಲನ್ನು ಕಿತ್ತುಕೊಳ್ಳುವಾಗ ಬಾಣ ನನ್ನ ಕಾಲಿನ ಮೇಲೆ ಬಿದ್ದು ಗಾಯವಾಯಿತು. ಅಂದಿನಿಂದ ನನ್ನ ಕಷ್ಟಗಳಿಗೆ ಷುರುವಾಯಿತು. ಆ ತಾಮ್ರದ ಚಾವಿಯಿಂದ ಮೃತ್ಯುವೇ ಪ್ರಾಪ್ತವಾಗುವುದಂತೆ !



ನನ್ನ ಯಜಮಾನನು ಗಾಯಕ್ಕೆ ಕಟ್ಟು ಕಟ್ಟಿ, ನನ್ನನ್ನು ಒಂಟೆಯಮೇಲೆ ಕೂರಿಸಿದನು. ನಾವು ಒಂದೇ ಸವನೆ ಮೂರು ದಿನ ಪ್ರಯಾಣಮಾಡಿ ಒಂದು ಹಣ್ಣಿನ ತೋಟವನ್ನು ಸೇರಿಕೊಂಡೆವು. ಪೆಟ್ಟಿನ ನೋವು ವಿಪರೀತವಾಗಿತ್ತು. ನನಗೆ ತುಂಬಾ ಬಾಯಾರಿಕೆಯಾಗಿದ್ದುದರಿಂದ ಮೆಲ್ಲನೆ ಕುಂಟುತ್ತಾ ನಡೆದು, ಒಂದು ಮರದಕೊಂಬೆಗೆ ಜೋಲಾಡುತ್ತಿದ್ದ ಹಣ್ಣೊಂದನ್ನು ಕಿತ್ತು ಬಾಯಲ್ಲಿಟ್ಟುಕೊಂಡು ಕಚ್ಚಿದೆ. ಕೂಡಲೇ ನನ್ನ ಹಲ್ಲುಗಳು ಆ ಹಣ್ಣಿಗೆ ಸಿಕ್ಕಿಕೊಂಡವು. ಅರಚಲೂ ಸಹ ಅವಕಾಶವಿಲ್ಲದಾಯಿತು. ನಾನು ತೇಲುಗಣ್ಣುಹಾಕಿ ಕೆಳಗೆ ಅಂಗಾತ ಬಿದ್ದುಬಿಟ್ಟೆ. ಯಜಮಾನನಿಗೆ ನನ್ನ ದುಸ್ಥಿತಿ ತಿಳಿದ ಕೂಡಲೇ ಆ ಮರದಬಳಿಗೆ ಹೋಗಿ ಕೆಳಗೆ ಬಿದ್ದಿದ್ದ ಹಣ್ಣುಗಳನ್ನು ಒಂದುಕಡೆ ಗುಡ್ಡೆಹಾಕಿದನು. ನಂತರ ಹುಳ ತಿನ್ನುತ್ತಿದ್ದ ಹಣ್ಣನ್ನು ಹುಡುಕಿ, ಅದರಲ್ಲಿದ್ದ ಹುಳಗಳನ್ನು ತೆಗೆದು ನನ್ನ ಬಾಯಿಗೆ ಸಿಕ್ಕಿಕೊಂಡಿದ್ದ ಹಣ್ಣಿನ ಮೇಲಿಟ್ಟನು. ಆ ಹುಳಗಳು ಹಣ್ಣನ್ನು ಕೊರೆದು ತಿಂದು ನನ್ನನ್ನು ಉಳಿಸಲು ಮೂರು ದಿನಗಳು ಹಿಡಿದುವು.

ಆ ಮೂರು ದಿನ ನಾನು ಪಟ್ಟ ಬವಣೆ ಹೇಳಲಾರೆ. ಮೂರು ದಿನವೂ ನನ್ನ ಧಣಿ ನನ್ನ ಬಳಿಯೇ ಇದ್ದನು. ನನ್ನ ಪಕ್ಕದಲ್ಲಿ ಕುಳಿತು ಊಟಮಾಡುತ್ತಿದ್ದನು; ನಿದ್ರೆಹೋಗುತ್ತಿದ್ದನು. ನಾನುಮಾತ್ರ ಹಸಿವಿನಿಂದ ತೊಳಲಾಡುತ್ತಿದ್ದೆ. ಬಾಯಿ ನನ್ನ ಸ್ವಾಧೀನಕ್ಕೆ ಬಂದಕೂಡಲೇ




ಏನಾದರೂ ತಿಂದು ನೀರು ಕುಡಿಯುವ ಅಪೇಕ್ಷೆಯಾಯಿತು. ಆದರೆ ನಮ್ಮ ಆಹಾರದ ಚೀಲ, ನೀರಿನ ತಿತ್ತಿ ಬರಿದಾಗಿತ್ತು. ನಾನು ಹಸಿವಿನಬಾಧೆ ತಾಳಲಾರದೆ ಘೋರನೆ ಅತ್ತೆನು. ಧಣಿ ನನ್ನನ್ನು ಸಮಾಧಾನಪಡಿಸಿ ಮತ್ತೆ ಪ್ರಯಾಣಕ್ಕೆ ಹೊರಡಿಸಿದನು. ನಾವು ಅಂದೆಲ್ಲಾ ಪ್ರಯಾಣಮಾಡಿ ಒಂದು ಬೆಟ್ಟದ ಬಳಿಗೆ ಬಂದೆವು. ಹಾಳುಮೂಳು ತಿಂದು ಆರೋಗ್ಯ ಕೆಡಿಸಿಕೊಳ್ಳಬೇಡವೆಂದು ನನ್ನ ಧಣಿ ನನಗೆ ಬುದ್ಧಿಹೇಳಿ, ತಾನೇ ಎಲ್ಲಿಗೋ ಹೋಗಿ ಪೇರುಹಣ್ಣನ್ನು ಕಿತ್ತು ತಂದನು. ಅವನು ಅದರ ಮುಳ್ಳು ಕಿತ್ತು, ಸಿಪ್ಪೆಸುಲಿದು, ಒಳಗಿನ ತಿರುಳನ್ನು ತಿನ್ನಲು ನನಗೆ ಕೊಟ್ಟನು. ತಿಂದನಂತರ ನಾನು ತುಸ ಹುಷಾರಾದೆನು.

ಚಂದ್ರೋದಯವಾದಕೂಡಲೇ ಕಂಬಳಿ ಹಾಸಿ, ಕಾಲುಚಾಚಿಕೊಂಡು ಮಲಗಿಕೊಳ್ಳಲು ಹವಣಿಸುತ್ತಿದ್ದೆ. ಆಗ ಫಕೀರನು ನನಗೊಂದು ಕೆಲಸ ಹಚ್ಚಿದನು. ನೀನು ಈಗಲೇ ಬೆಟ್ಟವನ್ನೇರಿ ಈ ರಾತ್ರಿ ಶಿಖರದಮೇಲೆ ಕಳೆಯಬೇಕು. ಇದೇ ನೀನು ನನಗೆ ಮಾಡಬಹುದಾದ ಬಹುಮುಖ್ಯವಾದ ಸಹಾಯ. ನಾಳೆ ಸೂರ್ಯೋದಯದ ತನಕ ಶಿಖರದಮೇಲಿದ್ದು, ನಮಾಜುಮಾಡಿದನಂತರ ಕೆಳಕ್ಕೆ ಇಳಿದುಬಾ. ಮರೆತಾದರೂ ನಿದ್ರೆಮಾಡಬೇಡ, ಹುಷಾರ್. ಹಾಗೇನಾದರೂ ನಿದ್ರೆಹೋದ ಪಕ್ಷಕ್ಕೆ ನಿನಗೆ ವಾಯುರೋಗ ಬಂದೀತು" ಎಂದು ಸಾರಿ ಹೇಳಿದನು. ಧಣಿಯ ಮಾತಿಗೆ ಪ್ರತಿ ಹೇಳಲಾದೀತೇ? ಆದುದರಿಂದ ನಾನು ಗೊಣಗುತ್ತಾ ಆ ಬೆಟ್ಟವನ್ನು ಹತ್ತಿ, ಶಿಖರವನ್ನು ಸೇರಿಕೊಂಡೆ. ಶರೀರದ ಬಳಲಿಕೆಯಿಂದ ಕೂಡಲೇ ನಿದ್ರೆ ಮುತ್ತಿಕೊಂಡು ಬಂತು. ಮಾರನೇಯ ದಿನ ಸೂರ್ಯೋದಯ ಸಮಯಕ್ಕೆ ನನಗೆ ಎಚ್ಚರವಾಯಿತು. ಅತಿ ಪ್ರಯಾಸದಿಂದ ಎದ್ದು ನಿಂತು, ಪೂರ್ವದಿಕ್ಕಿನಕಡೆ ತಿರುಗಿ, ನಮಾಜುಮಾಡಿ, ಬೆಟ್ಟದಿಂದ ಮೆಲ್ಲನೆ ಕೆಳಗಿಳಿಯಲು ಪ್ರಯತ್ನಿಸಿದೆ.

ನನ್ನ ಶರೀರವೆಲ್ಲ ಜಡವಾಗಿತ್ತು. ನಾನು ತುಸಕ್ಕನೆ ಕುಸಿದು ಬೆಟ್ಟದಮೇಲಿಂದ ಉರುಳಿಕೊಂಡು ಕೆಳಗೆ ಬಿದ್ದೆ. ದೇಹವೆಲ್ಲಾ ಪರಚಿಕೊಂಡು ರಕ್ತಪ್ರವಾಹ ಹರಿಯಿತು. ನನ್ನ ಧಣಿ ನನ್ನಕಡೆ ನೋಡಲಿಲ್ಲ. ಆತನು

ನೆಲದಮೇಲೆ ಗೆರೆಗಳನ್ನು ಎಳೆಯುತ್ತಾ "ನೆರಳು ಕಂಡು ನೀನು ಬರುವುದನ್ನು ಅರಿತೆ. ಎಲ್ಲಿ, ಇತ್ತ ಬಾ, ಇಲ್ಲೊಂದಷ್ಟು ಅಗೆಯೋಣ" ಎಂದನು. ನನಗೆ ದುಃಖ ತಡೆಯಲಾಗಲಿಲ್ಲ.

ಬಿಕ್ಕಿಬಿಕ್ಕಿ ಅಳಲಾರಂಭಿಸಿದೆ. ನನ್ನ ನರಳಾಟ ಕೇಳಿ ಆತನು ಚಕಿತನಾಗಿ ನನ್ನ ಕಡೆ ದೃಷ್ಟಿ ಹಾಯಿಸಿದನು. ಎಚ್ಚರಿಕೆ ಕೊಟ್ಟಿದ್ದರೂ ಸಹ ಬೆಟ್ಟದಮೇಲೆ ನಿದ್ರಿಸಿದೆನೆಂದು ಆತನು ಬಹಳ ಸಿಟ್ಟುಮಾಡಿಕೊಂಡನು. ಕೂಡಲೇ ತನ್ನಬಳಿಯಿದ್ದ ಚಾಕು ತೆಗೆದು ನನ್ನ ಕೀಲುಗಳಬಳಿ ಆಳವಾಗಿ ಚುಚ್ಚಿ ರಂಧ್ರಮಾಡಿದನು. ರಕ್ತಕ್ಕೆ ಬದಲಾಗಿ ನೀರು ಬಂತು. ನನ್ನ ನೋವು ಬಹುಮಟ್ಟಿಗೆ ಕಡಿಮೆಯಾಯಿತು.

ಆತನು ಗುರುತುಹಾಕಿದ್ದ ಸ್ಥಳದಲ್ಲಿ ಇಬ್ಬರೂ ಅಗೆಯಲು ಪ್ರಾರಂಭಿಸಿದೆವು. ಅಗೆಯುತ್ತಿರುವಾಗ ನಮಗೊಂದು ಅಮೃತಶಿಲೆಯ ಸಮಾಧಿ ಕಾಣಿಸಿತು. ಅದರಲ್ಲಿ ಮಾನವ ಸೋರ್ವನ ಮೂಳೆಗಳೂ, ಚರ್ಮದಮೇಲೆ ಲಿಖಿತವಾಗಿದ್ದ ಶಾಸನವೂ ಕಾಣಿಸಿತು. ಫಕೀರನು ಆ ಶಾಸನವನ್ನು ಆತುರದಿಂದ ಓದಿದನು. "ಹಸನ್, ಮಾನವಮಾತ್ರರು ನೋಡದ ಇರಾಮ್ ನಗರದ ಮಾರ್ಗವನ್ನು ಇದರಲ್ಲಿ ವಿವರಿಸಲಾಗಿದೆ. ಯಾವ ಲೋಹವನ್ನಾದರೂ ಚಿನ್ನವನ್ನಾಗಿ ಬದಲಾಯಿಸಬಲ್ಲ ಸಿಂಧುರ ಗಂಧಕ ಅಲ್ಲಿ ಸಿಗುತ್ತದೆ" ಎಂದ ಫಕೀರ.

ನಾವು ಬೆಟ್ಟವನ್ನು ಬಳಸಿಕೊಂಡು ಪಶ್ಚಿಮ ದಿಕ್ಕಿನಲ್ಲಿ ಮೂರು ದಿನ ಪ್ರಯಾಣಮಾಡಿ



ಒಂದು ಸರ್ಪಗಳ ಕಣಿವೆಯನ್ನು ಸೇರಿಕೊಂಡೆವು. ಎಲ್ಲಿ ನೋಡಿದರೂ, ಎತ್ತ ನೋಡಿದರೂ ಕಪ್ಪನೆಯ ಕಾಳಸರ್ಪಗಳು ಹರಿದಾಡುತ್ತಿದ್ದುವು. ಫಕೀರನು ನನ್ನ ಕೈಗೆ ಬಿಲ್ಲುಬಾಣಗಳನ್ನು ಕೊಟ್ಟು "ಕೊಂಬಿರುವ ಉರಗವನ್ನು ಕೊಂದು ಅದರ ತಲೆ ಮತ್ತು ಗುಂಡಿಗೆಯನ್ನು ತೆಗೆದುಕೊಂಡು ಬಾ" ಎಂದು ಆಜ್ಞಾಪಿಸಿದನು. ನಾನು ಜೀವದಾಶೆಯನ್ನು ತೊರೆದು ಆ ಕಣಿವೆಯ ಒಳಭಾಗವನ್ನು ಪ್ರವೇಶಿಸಿದೆ. ಸುದೈವದಿಂದ ನಾನು ಕೊಂಚ ದೂರ ಹೋಗಲು ನನಗೊಂದು ಕೊಂಬುಗಳಿರುವ ಸರ್ಪ ಕಾಣಿಸಿತು. ಯುಕ್ತಿಯಿಂದ ಅದನ್ನು ಕೊಂದು, ಅದರ ತಲೆ ಮತ್ತು ಗುಂಡಿಗೆಯನ್ನು ತೆಗೆದುಕೊಂಡು ಹೋಗಿ

ಫಕೀರನಿಗೆ ಕೊಟ್ಟೆ. ಆತನು ಒಂದುಕಡೆ ಒಲೆಯಿಟ್ಟು, ಅದರಮೇಲೆ ಕಬ್ಬಿಣದ ಪಾತ್ರೆ ಯಿಟ್ಟು, ಅದರಲ್ಲಿ ಸರ್ಪದ ತಲೆ ಮತ್ತು ಹೃದಯವನ್ನೂ ಹಾಕಿ, ಎರಡು ತೊಟ್ಟು ಎಂಥಹದೋ ದ್ರಾವಕವನ್ನು ಸುರಿದು, ಏನೋ ಮಂತ್ರ ಗೊಣಗಿದನು. ಕೊಂಚಹೊತ್ತಾದ ನಂತರ ಆ ಪಾತ್ರೆಯಲ್ಲಿದ್ದ ದ್ರವವನ್ನು ತನ್ನ ಭುಜಗಳಿಗೆ ಹಾಕಿ ತಿಕ್ಕುವಂತೆ ಹೇಳಿದನು. ದ್ರವವನ್ನು ಆತನ ಭುಜಗಳಿಗೆ ಹಾಕಿ ತಿಕ್ಕಲು ಆತನಿಗೆ ರೆಕ್ಕಗಳು ಬಂದುವು. ನನಗೂಸಹ ರೆಕ್ಕೆ ಬರುವತನಕ ಆ ದ್ರವವನ್ನು ಆತನು ತಿಕ್ಕಿದನು. ನಂತರ ಇಬ್ಬರೂ ಆಕಾಶಕ್ಕೆ ಹಾರಿ ಇರಾಮ್ ನಗರವನ್ನು ಸೇರಿ ಕೊಂಡೆವು. ನಿರ್ಮಾನುಷ್ಯವಾದ ಆ ನಗರ ದಲ್ಲಿ ನಾವು ಕಂಡ ಸಿರಿಸಂಪತ್ತುಗಳನ್ನು ಬಣ್ಣಿ ಸಲು ನನಗೆ ಬಾಯಿಲ್ಲ. ಆದರೆ ನಾವು ಅಲ್ಲಿಂದ 'ಕೀಮಿಯಾ' ಎಂಬ ಚೂರ್ಣವನ್ನು ಮಾತ್ರ ತಂದೆವು. ಮನೆಗೆ ಬಂದಾಗ ನನ್ನ ಮಡದಿ ಮಕ್ಕಳು ಮಡಿದುಹೋಗಿದ್ದರು. ಆಗ ಫಕೀರನು ನನ್ನನ್ನು ಸಮಾಧಾನಪಡಿಸಿ ತನ್ನೊಂ ದಿಗೆ ಒಂದು ಭವ್ಯಭವನಕ್ಕೆ ಕರೆದುಕೊಂಡು ಹೋದನು. ಆ ಭವನ ನೈಲ್‌ನದಿ ತೀರದಲ್ಲಿದೆ. ನಾವು ಕೀಮಿಯಾ ಚೂರ್ಣದ ಸಹಾಯದಿಂದ ಬಹಳ ಬಂಗಾರ ತಯಾರುಮಾಡಿದೆವು. ಫಕೀರನು ತನ್ನ ಸರ್ವಸ್ವವನ್ನು ನನಗೊಪ್ಪಿಸಿ ಕಾಲವಾದನು.

ನನ್ನಬಳಿಯಿದ್ದ ಚಿನ್ನ ಮತ್ತು ಬೆಳ್ಳಿಯ ಚಾವಿಗಳೇ ಇಷ್ಟೆಲ್ಲಾ ಕಷ್ಟಗಳಿಗೆ ಕಾರಣ ವೆಂದು ನನಗೆ ತಿಳಿಯಲು, ಅದನ್ನು ಕರಗಿಸಿ ಬಿಡಲು ಸಿದ್ಧನಾಗುತ್ತಿದ್ದೆ. ಆಗ ನಿಮ್ಮ ತಂದೆ ಯವರ ಭಟರು ನನ್ನನ್ನು ಬಂಧಿಸಿದರು. ಬಂಗಾರಮಾಡುವ ರಹಸ್ಯವನ್ನು ತನಗೆ ತಿಳಿಸು ವಂತೆ ನಿಮ್ಮ ತಂದೆ ಪೀಡಿಸಿದರು. ನಾನು ಅವರಿಗೆ ಹೇಳಲಿಲ್ಲ. ಆದರೆ ನಿಮಗೆ ಅದರ ರಹಸ್ಯ ಹೇಳಿಬಿಡುತ್ತೇನೆ. ಚಿನ್ನಮಾಡಲು ಕೀಮಿಯಾ ಚೂರ್ಣವೇ ಮುಖ್ಯವಾದ ವಸ್ತು. ನೀವು ಅದನ್ನು ಉಪಯೋಗಿಸಿಕೊಳ್ಳಿ."

ಹಸನ್ ಹೇಳಿದ ಕಥೆ ಕೇಳಿ ಕಲೀಫಾ ಸಂಪ್ರೀತನಾಗಿ, ಅವನನ್ನು ತನ್ನ ಆಪ್ತ ವರ್ಗಕ್ಕೆ ಸೇರಿಸಿಕೊಂಡನು.



# ಅಂಗಹೀನನ ಆರ್ತನಾದ

[ಎ. ಅನಂತಯ್ಯ ನಾವಡ, ವಿದ್ವಾನ್]

ಬಂದೆನು ದೂರದ ಪರವೂರಿಂದ!
ತಂದೆನು ಹಸಿವೆಯ ಹೊಟ್ಟೆಯನೊಂದ!
ಹೆರವರ ಬಯ್ಗುಳನೆಷ್ಟೋ ತಿಂದ—
ಕಾಲೊಂದಿಲ್ಲದ ಭಿಕ್ಷುಕ ಬಂದ!
ಹಸಿವೆಯಾಗುತಿದೆ! ನೀಡುವಿರಾ?

ತಂದೆ ತಾಯಿಗಳ ಕಳೆದಿಹೆನಲ್ಲಾ!
ಬಂಧುಬಳಗದವರಾರೂ ಇಲ್ಲ!
ಹೇಳುವರಿಲ್ಲ! ಕೇಳುವರಿಲ್ಲ!
ನೀವೇ ನನಗೆ ಬಂಧುಗಳೆಲ್ಲ!
ಹಸಿವೆಯಾಗುತಿದೆ! ನೀಡುವಿರಾ?

ಹುಟ್ಟಿದನಾಡು ನಾ ತಿಳಿದಿಲ್ಲ!
ಬೆಳೆಯುವ ಬೀಡು ವಿಶ್ವವೆ ಎಲ್ಲ!
ವಾಸಮಾಡುವ ಮನೆ ನನಗಿಲ್ಲ!
ಮುಂದಿನ ಗತಿಯನು ದೇವನು ಬಲ್ಲ!
ಹಸಿವೆಯಾಗುತಿದೆ! ನೀಡುವಿರಾ?

ಅತ್ಯಾಶೆಯ ನಾ ಪಡುವವನಲ್ಲ!
ಕೂಡಿಡುವಾಶೆಯ ತಳೆದವನಲ್ಲ!
ಅತಿಸುಖ ಬಯಸುವ ಹಂಬಲವಿಲ್ಲ!
ಹಿಡಿ ಅನ್ನವೆ ನನ್ನಾಶೆಯು ಎಲ್ಲ!
ಹಸಿವೆಯಾಗುತಿದೆ! ನೀಡುವಿರಾ?

ನಾ ಬಂದರೆ ಕದ ಮುಚ್ಚಲುಬೇಡಿ!
ಕೊಬ್ಬಿದನಾಯನು ಛೂ ಬಿಡಬೇಡಿ!
ದಿನವೂ ನಾ ಬರುವವನೇ? ನೋಡಿ!
ಹಿಡಿ ಅನ್ನವನೋ ಧನಿಗಳೆ! ನೀಡಿ!
ಹಸಿವೆಯಾಗುತಿದೆ! ನೀಡುವಿರಾ?




ಧವಳಗಿರಿಯ ರಾಜ ಯಶೋಧನನು ಆದರ್ಶಪ್ರಾಯನಾದ ಅರಸ. ಅವನು ಒಂದು ದಿನ ತನ್ನ ರಾಜಧಾನಿಯ ಬಡಾವಣೆಯಲ್ಲಿ ಛದ್ಮವೇಷದಿಂದ ತಿರುಗಾಡುತ್ತಿರಲು ಒಂದು ಗುಡಿಸಿಲಿನಲ್ಲಿ ಮೂವರು ಅಕ್ಕತಂಗಿಯರು ಸಂಭಾಷಿಸುತ್ತಿರುವುದು ಅವನಿಗೆ ಕೇಳಿಸಿತು.

ಮೂವರಲ್ಲಿ ಹಿರಿಯಳು "ರಾಜನಿಗೆ ತಿಂಡಿ ತಿನಸುಗಳನ್ನು ಮಾಡುವಾತನನ್ನು ವಿವಾಹವಾಗಬೇಕೆಂದು ನನ್ನ ಆಶೆ. ಆಗ ನಾನು ಅರಸನು ತಿಂದನಂತರ ಉಳಿಯುವ ಭಕ್ಷ್ಯಗಳನ್ನು ಭುಜಿಸಬಹುದು" ಎಂದಳು.

"ಲೇ, ಅಕ್ಕಾ, ಫಲಹಾರಗಳಿಂದ ಹೊಟ್ಟೆ ತುಂಬುವುದೇನೇ? ನನಗೆ ಅರಮನೆಯ ಬಾಣಸಿಗನನ್ನೇ ವಿವಾಹವಾಗುವ ಯೋಚನೆಯಿದೆ" ಎಂದಳು ಎರಡನೇಯವಳು.

ಮೂರನೇಯವಳು ಮಾತನಾಡಲಿಲ್ಲ. ಆದರೆ ಅವಳ ಅಕ್ಕಂದಿರು "ಲೇ, ನೀನು ಯಾರನ್ನು ಮದುವೆಯಾಗಬೇಕೆಂದಿರುವೆ, ಹೇಳೇ" ಎಂದು ಒತ್ತಾಯ ಮಾಡಿದರು. ಆಗ ತವಳು "ಮಹಾರಾಜರನ್ನು ವಿವಾಹವಾಗಿ, ರತ್ನದಂತಹ ಮಕ್ಕಳನ್ನು ಪಡೆಯಬೇಕೆಂಬ ಆಶೆ ನನಗಿದೆ" ಎಂದಳು.

ಅವರ ಮಾತುಕತೆ ಕೇಳಿ ರಾಜನು ಮಾರನೇಯ ದಿವಸ ಆ ಸಹೋದರಿಯರನ್ನು ಅರಮನೆಗೆ ಕರೆಯಿಸಿದನು. ಒಂದು ಸುಮುಹೂರ್ತದಲ್ಲಿ ಮೂವರಿಗೂ ಅವರವರ ಇಷ್ಟದಂತೆ ಮದುವೆಯಾಯಿತು. ಕಿರಿಯ ಕನ್ಯೆಯ ವಿವಾಹ ಅರಸನೊಂದಿಗೆ ಬಹಳ ವೈಭವದಿಂದ ನಡೆಯಿತು.

ತಾನು ರಾಣಿಯಾದರೂ ಕಿರಿಯಾಕೆ ಹೆಮ್ಮೆಪಡಲಿಲ್ಲ. ತನ್ನ ಅಕ್ಕಂದಿರನ್ನು ಬಹಳ ಆದರದಿಂದ ಕಾಣುತ್ತಿದ್ದಳು. ಆದರೆ ಅಕ್ಕಂದಿರು ಮಾತ್ರ ತಂಗಿಯಮೇಲೆ ಅಕಾರಣವಾಗಿ ಅಸೂಯೆಪಡುತ್ತಿದ್ದರು.

ಯಶೋಧನ ಮಹಾರಾಜನು ತನ್ನ ಮಡದಿಯನ್ನು ತುಂಬಾ ಪ್ರೇಮದಿಂದ ಕಾಣುತ್ತಿದ್ದನು. ಆಕೆ ಎಲ್ಲವಿಧಗಳಲ್ಲಿ ಅರಸನಿಗೆ ತಕ್ಕ ಸತಿ ಎನ್ನಿಸಿಕೊಂಡಳು.

ಕುಮಾರಿ ಸತ್ಯವತಿ

ಕೊಂಚಕಾಲವಾದ ನಂತರ ರಾಣಿ ಗರ್ಭವತಿಯಾದಳು. ಪ್ರಸವದ ಸಮಯ ಸಮೀಪಿಸಿತು. ಆಕೆಯ ಅಕ್ಕಂದಿರೇ ಸ್ವತಃ ರಾಣಿಯ ಹೆರಿಗೆಮಾಡಿಸಿದರು. ರಾಣಿಗೆ ಸುಂದರನಾದ ಮಗನು ಜನಿಸಿದನು. ಆ ಮಗುವನ್ನು ಒಂದು ತೊಟ್ಟಿಲಲ್ಲಿಟ್ಟು ಅರಮನೆಯ ಪಕ್ಕದಲ್ಲಿ ಹರಿಯುವ ಕಾಲುವೆಯಲ್ಲಿ ತೇಲಿಬಿಟ್ಟು ಒಂದು ನಾಯಿಮರಿಯನ್ನು ತಂದು ಬಾಣಂತಿಯ ಪಕ್ಕದಲ್ಲಿಟ್ಟರು.

ತನ್ನ ಪತ್ನಿ ನಾಯಿಯ ಮರಿಯನ್ನು ಹೆಡೆದಳೆಂಬ ವಿಷಯ ಕೇಳಿ ರಾಜನ ಎದೆಯೊಡೆಯಿತು. ಆದರೂ ಅವನು ತನ್ನ ದುಃಖವನ್ನು ನುಂಗಿಕೊಂಡನು.

ರಾಣಿಯ ಅಕ್ಕಂದಿರು ತೊಟ್ಟಿಲಲ್ಲಿ ತೇಲಿಬಿಟ್ಟ ಮಗು ರಾಜೋದ್ಯಾನದ ಮಾಲಿಗೆ ಸಿಕ್ಕಿತು. ಸಂತಾನಹೀನನಾದ ಆ ಮಾಲಿ ಮಗುವನ್ನು ಮನೆಗೆ ತೆಗೆದುಕೊಂಡು ಹೋಗಿ ಸುಜಾತನೆಂದು ಹೆಸರಿಟ್ಟು ಅತಿ ಮಮತೆಯಿಂದ ಸಲಹುತ್ತಿದ್ದನು.

ಮಾರನೇಯ ವರ್ಷ ರಾಣಿ ಮತ್ತೊಬ್ಬ ಮಗನನ್ನು ಪ್ರಸವಿಸಿದಳು. ಆಕೆಯ ಹೆರಿಗೆ ಮಾಡಿದ ಅಕ್ಕಂದಿರು ಈ ಸಲ ಒಂದು ಬೆಕ್ಕಿನ ಮರಿಯನ್ನು ತಂದು ಮಲಗಿಸಿ, ಮಗುವನ್ನು ಕಾಲುವೆಯಲ್ಲಿ ತೇಲಿಬಿಟ್ಟರು. ಆ ಮಗುವೂ ಸಹ ತೋಟಮಾಲಿಗೆ ಸಿಕ್ಕಿತು. ಮಾಲಿ ಸುಕೇತನೆಂದು ಆ ಮಗುವಿಗೆ ನಾಮಕರಣ ಮಾಡಿ, ಅತಿ ಮಮಕಾರದಿಂದ ಸಾಕುತ್ತಿದ್ದನು.



ತನ್ನ ಸತಿ ಎರಡುಬಾರಿ ಗರ್ಭಿಣಿಯಾಗಿ, ಎರಡು ಜಂತುಗಳನ್ನು ಹಡೆದುದನ್ನು ಕಂಡು ರಾಜನು ತುಂಬಾ ನೊಂದುಕೊಂಡನು. ಆದರೆ ರಾಣಿಯಮೇಲಿನ ಮೋಹದಿಂದ ಆಕೆಯನ್ನು ಕ್ಷಮಿಸಿದನು.

ರಾಣಿ ಮೂರನೇಯ ಬಾರಿ ಹೆಣ್ಣು ಶಿಶುವನ್ನು ಹೆತ್ತಳು. ಅಕ್ಕಂದಿರು ಈ ಸಲ ಒಂದು ಇಲಿಮರಿಯನ್ನು ತಂದು ರಾಣಿಯ ಪಕ್ಕದಲ್ಲಿ ಮಲಗಿಸಿ, ಹೆಣ್ಣುಮಗುವನ್ನು ಯಥಾಪ್ರಕಾರ ಕಾಲುವೆಯಲ್ಲಿ ತೇಲಿಬಿಟ್ಟರು. ಆ ಮಗೂ ಸಹ ಮಾಲಿಗೆ ಸಿಕ್ಕಿದಳು. ಮಗು ತುಂಬಾ ಅಂದವಾಗಿತ್ತು. ಅವಳ ಮುಖ ಅರಳಿದ ಪುಷ್ಪದಂತಿತ್ತು. ನಕ್ಕರೆ ಮುತ್ತುಗಳು ಉದುರುತ್ತಿದ್ದುವು. ಹೆಣ್ಣುಕೂಸಿಗೆ ಸುಹಾಸಿನಿ

ಯೆಂದು ಮಾಲಿ ಹೆಸರಿಟ್ಟನು. ಹೀಗೆ ಸಿಕ್ಕಿದ ಮೂರು ಮಕ್ಕಳು ಇನ್ನೂ ಚಿಕ್ಕವರಿದ್ದಾಗಲೇ ಮಾಲಿಯ ಮಡದಿ ಮರಣಹೊಂದಿದಳು. ಮಾಲಿ ಅರಮನೆಯ ನೌಕರಿಯಿಂದ ನಿವೃತ್ತನಾಗಿ ರಾಜನು ಕೊಟ್ಟ ಹಣದಿಂದ ನಗರದ ಆಚೆ ಒಂದು ಉದ್ಯಾನ ಮಾಡಿಕೊಂಡು, ಅಲ್ಲೇ ಮನೆಯನ್ನು ಕಟ್ಟಿಕೊಂಡು ಮಕ್ಕಳೊಂದಿಗೆ ಆನಂದದಿಂದ ಜೀವನ ಸಾಗಿಸುತ್ತಿದ್ದನು. ಮಕ್ಕಳು ಪ್ರಾಪ್ತವಯಸ್ಕರಾಗುವ ಸಮಯಕ್ಕೆ ಸರಿಯಾಗಿ ಮಾಲಿ ತೀರಿಹೋದನು. ಮರಣಶಯ್ಯೆಯಲ್ಲಿರುವಾಗ ಸುಹಾಸಿನಿಯನ್ನು ಅತ್ಯಂತ ಜಾಗರೂಕತೆಯಿಂದ ನೋಡಿಕೊಂಡಿರಬೇಕೆಂದು ಅವಳ ಅಣ್ಣಂದಿರಿಗೆ ಹೇಳಿದನು.

ಸುಜಾತ, ಸುಕೇತರು ಎಂದಾದರೊಂದು ದಿನ ಬೇಟೆಗೆ ಹೋಗುತ್ತಿದ್ದುದುಂಟು. ಆದರೆ ಸುಹಾಸಿನಿ ಎಂದೂ ಉದ್ಯಾನವನವನ್ನು ಬಿಟ್ಟು ಕದಲುತ್ತಿರಲಿಲ್ಲ. ಒಂದು ದಿನ ಅವಳು ಉದ್ಯಾನದಲ್ಲಿ ಒಂಟಿಯಾಗಿದ್ದಾಗ ಮುದುಕಿಯೊಬ್ಬಳು ಬಂದು "ಆಹಾ ಎಂತಹ ಸೊಗಸಾದ ಉದ್ಯಾನ. ಈ ಮರದನೆರಳು ಎಷ್ಟು ತಂಪಾಗಿದೆ. ಸ್ವಲ್ಪಹೊತ್ತು ಇಲ್ಲಿ ಕುಳಿತು ವಿಶ್ರಮಿಸಿಕೊಂಡು ಹೋಗಲು ಅನುಮತಿ ನೀಡುವೆಯಾ, ತಾಯಿ" ಎಂದು ಸುಹಾಸಿನಿಯನ್ನು ಕೇಳಿದಳು.

ಸುಹಾಸಿನಿಯೂ ಸಹ ಆ ಮುದುಕಿಯೊಂದಿಗೆ ಮರದನೆರಳಲ್ಲಿ ಕುಳಿತು "ಈ ತೋಟದಲ್ಲಿ ಏನಾದರೂ ಕೊರತೆ ಕಾಣಿಸುವುದೇ, ಅಜ್ಜೀ"



ಎಂದು ಕೇಳಿದಳು. "ಮಾತನಾಡುವ ಪಕ್ಷಿ, ಹಾಡುವ ವೃಕ್ಷ, ಜೀವಜಲಗಳಿದ್ದರೆ ಈ ತೋಟ ವನ್ನು ಸರಿದೂಗಬಲ್ಲ ಉದ್ಯಾನ ಪ್ರಪಂಚದಲ್ಲೇ ಇರಲಾರದು" ಎಂದಳು ಅಜ್ಜಿ. "ಹೌದೆ? ಆ ಮೂರು ವಸ್ತುಗಳು ಎಲ್ಲಿ ಸಿಗುವುದು, ಅಜ್ಜೀ ನನಗೆ ಹೇಳು" ಎಂದು ಸುಹಾಸಿನಿ ವೃದ್ಧಳನ್ನು ಕೇಳಿದಳು.

"ಪೂರ್ವದಿಕ್ಕಿನಲ್ಲಿ ಇಪ್ಪತ್ತು ದಿನ ಪ್ರಯಾಣಮಾಡಿ, ಇಪ್ಪತ್ತೊಂದನೇಯ ದಿನ ಕಣ್ಣಿಗೆ ಬೀಳುವ ಮೊದಲನೇ ವ್ಯಕ್ತಿಯನ್ನು ಕೇಳಿದರೆ ಅವು ಸಿಕ್ಕುವ ಸ್ಥಳವನ್ನು ಹೇಳು ತ್ತಾನೆ." ಎಂದು ಹೇಳಿ ಆ ಮುದುಕಿ ತನ್ನ ದಾರಿ ತಾನು ಹಿಡಿದು ಹೊರಟುಹೋದಳು. ತನ್ನ ಸಹೋದರರು ಮನೆಗೆ ಹಿಂತಿರುಗಿದ ಕೂಡಲೇ ಸುಹಾಸಿನಿ ಅವರೊಂದಿಗೆ ವೃದ್ಧಳು ಹೇಳಿದ ವಿಷಯವನ್ನು ತಿಳಿಸಿದಳು. ಆಗ ಸುಜಾತನು "ತಂಗೀ, ನಾಳೆಯೇ ಹೊರಟು ಅವುಗಳನ್ನು ತರುತ್ತೇನೆ. ನಮ್ಮ ಉದ್ಯಾನ ವನ್ನು ನಂದನವನವನ್ನಾಗಿ ಮಾಡುತ್ತೇನೆ" ಎಂದನು. ಅದೇ ರೀತಿ ಅವನು ಮಾರನೇಯ ದಿನವೇ ಕುದುರೆಯನ್ನೇರಿ ಪೂರ್ವದಿಕ್ಕಿನಕಡೆ ಹೊರಟನು. ಅವನು ಇಪ್ಪತ್ತು ದಿನ ಪ್ರಯಾಣ ಮಾಡಿ, ಇಪ್ಪತ್ತೊಂದನೆಯ ದಿನ ಕಾಡಿನ ನಡುವೆ ಯಿದ್ದ ಬೆಟ್ಟದಬಳಿಗೆ ಬಂದನು. ಬೆಟ್ಟದ ತಪ್ಪಲಲ್ಲಿ ತಪಸ್ಸು ಮಾಡುತ್ತಿದ್ದ ಕಪಿಲ ಮಹಾಮುನಿ ಕಾಣಿಸಿದರು. ಅಂದು ಅವರು ಅವನಿಗೆ ಕಾಣಿಸಿದ ಮೊದಲನೇಯ ವ್ಯಕ್ತಿ. ಆದುದರಿಂದ ಅವರನ್ನು ಕುರಿತು "ಮುನೀ





ಶ್ವರರೇ, ಮಾತಾಡುವ ಪಕ್ಷಿ, ಹಾಡುವವೃಕ್ಷ, ಜೀವಜಲಗಳು ಇರುವ ಸ್ಥಳವನ್ನು ತಿಳಿಸುವ ಕೃಪೆ ತೋರಬೇಕು" ಎಂದು ಅತಿವಿನಯದಿಂದ ಬೇಡಿಕೊಂಡನು.

"ವತ್ಸಾ, ಅವು ಬೆಟ್ಟದ ಶಿಖರದಮೇಲಿವೆ. ಆದರೆ ಅವುಗಳಿಗಾಗಿ ಹುಡುಕಿಕೊಂಡು ಹೊರಟವರು ಯಾರು ಹಿಂತಿರುಗಿಬಂದಿಲ್ಲ" ಎಂದನು ಮುನಿ. ಸುಜಾತನು ಹೆದರದೆ ಬೆಟ್ಟವನ್ನೇರಿದನು. ದಾರಿಯಲ್ಲಿ ಅನೇಕ ಕರಿಯ ಶಿಲಾವಿಗ್ರಹಗಳು ಕಾಣಿಸಿದುವು. ಮನುಷ್ಯರೇ ಈ ರೀತಿ ಶಿಲಾವಿಗ್ರಹಗಳಾಗಿರುವ ವಿಷಯ ಅವನಿಗೆ ತಿಳಿಯದು. ಕೊಂಚದೂರ ಹೋಗಲು ಅವನಿಗೆ ಯಾರದೋ ಕರ್ಕಶವಾದ ಗದರಿಕೆ ಕೇಳಿಬಂತು. ಅವನು ಅತ್ತಿತ್ತ ತಿರುಗಿ ನೋಡಿದನು. ಹಾಗೆ ನೋಡಿದ ಮರುಕ್ಷಣವೇ ಆತನು ಝುರ್ರನೆ ಒಂದು ಶಿಲಾಪ್ರತಿಮೆಯಾದನು.

ನಲವತ್ತು ದಿನಗಳು ಕಳೆದರೂ ತನ್ನ ಅಣ್ಣನು ಹಿಂತಿರುಗಿ ಬರದಿರಲು ಸುಕೇತನು ಬೆಟ್ಟದಬಳಿಗೆ ಹೊರಟನು. ಹೋಗಬೇಡವೆಂದು ಸುಹಾಸಿನಿ ಪರಿಪರಿಯಾಗಿ ಕೇಳಿಕೊಂಡಳು. ಆದರೆ ಅವನು ತಂಗಿಗೆ ಸಮಾಧಾನಹೇಳಿ ಅಣ್ಣನನ್ನು ಹುಡುಕಿಕೊಂಡು ಹೊರಟನು. ಅವನೂ ಸಹ ತನ್ನ ಅಣ್ಣನಂತೆಯೇ ಕಪಿಲಮಹಾಮುನಿಯನ್ನು ಕಂಡು, ಅವರು ನಿವಾರಿಸಿದರೂ ಲಕ್ಷ್ಯಮಾಡದೆ ಬೆಟ್ಟವನ್ನೇರಿದನು. ಕರ್ಕಶಧ್ವನಿಯನ್ನು ಕೇಳಿ ಹೆದರಿ, ಅತ್ತಿತ ನೋಡಲು, ಅಣ್ಣನಂತೆಯೇ ಶಿಲಾಪ್ರತಿಮೆಯಾದನು.

ತನ್ನ ಸಹೋದರರು ಮತ್ತೆ ಬರಲಾರರೆಂದು ಖಚಿತವಾದನಂತರ ಸುಹಾಸಿನಿಯು ಗುಂಡಿಗೆ ಕಲ್ಲು ಮಾಡಿಕೊಂಡಳು. ತನ್ನ ಸಹೋದರರನ್ನಾದರೂ ಹುಡುಕಿಕೊಂಡು ಬರುವ ಉದ್ದೇಶದಿಂದ ಕುದುರೆಯೇರಿ ಕಪಿಲ ಮಹಾಮುನಿಯಿದ್ದ ಸ್ಥಳಕ್ಕೆ ಬಂದಳು. "ಮುನೀಶ್ವರರೇ, ನನ್ನ ಅಣ್ಣಂದಿರು ಇತ್ತಕಡೆ ಬಂದರೇ?" ಎಂದು ಕೇಳಿದಳು.

"ಬಂದರು ತಾಯಿ. ಅವರು ಬೆಟ್ಟದಮೇಲೆ ಶಿಲಾವಿಗ್ರಹಗಳಾಗಿದ್ದಾರೆ" ಎಂದರು ಮಹಾಮುನಿ. "ಸ್ವಾಮಿ, ಅವರನ್ನು ಬದುಕಿಸಿಕೊಳ್ಳುವ ಮಾರ್ಗವೇನು? ನನಗೆ ಅವರ-ಹೊರತು ಬೇರೆ ದಿಕ್ಕಿಲ್ಲ" ಎಂದು ಗದ್ಗದ

ಕಂಠದಿಂದ ನುಡಿದಳು ಸುಹಾಸಿನಿ. "ಆ ಬೆಟ್ಟವನ್ನೆರಿ ಮಾತಾಡುವ ಹಕ್ಕಿ, ಹಾಡುವ ಮರ ಮತ್ತು ಜೀವಜಲಗಳನ್ನು ತಂದು ಕೊಂಡರೆಮಾತ್ರ ನಿನ್ನ ಅಣ್ಣಂದಿರನ್ನು ಬದು ಕಿಸಿಕೊಳ್ಳಬಲ್ಲೆ. ನೀನು ಪ್ರತ್ಯೇಕವಾಗಿ ಅವು ಗಳನ್ನು ಪಡೆಯುವಸಲುವಾಗಿಯಲ್ಲದೆ, ನಿನ್ನ ಸಹೋದರರನ್ನು ಕಾಪಾಡಲು ಹೋಗುತ್ತಿರು ವೆಯಾದ ಕಾರಣ ನಿನಗೆ ಜಯ ಲಭಿಸುವುದು ಖಂಡಿತ" ಎಂದನು.



ಅವಳು ಬೆಟ್ಟವನ್ನೇರುತ್ತಿದ್ದಾಗ ಅವಳಿಗೆ ಬೆದರಿಕೆಯ ಕೂಗಾಟ ಕೇಳಿಸಿತು. ಆದರೆ ಆ ವಿಕೃತಧ್ವನಿಗೆ ಸುಹಾಸಿನಿ ಬೆದರಲಿಲ್ಲ. ಅವಳು ಬೆಟ್ಟದ ಶಿಖರವನ್ನೇರಿ ಪಂಜರದಲ್ಲಿದ್ದ ಒಂದು ಪಕ್ಷಿಯನ್ನು ಕಂಡಳು. ಅದೇ ಮಾತಾಡುವ ಪಕ್ಷಿ.

ಆ ಪಕ್ಷಿ ಅವಳಿಗೆ ಹಾಡುವಮರ, ಜೀವ ಜಲವಿದ್ದ ಕೊಳವನ್ನು ತೋರಿಸಿತು. ಪಕ್ಷಿಯ ಸಲಹೆಯಂತೆ ಅವಳಾ ಹಾಡುವವೃಕ್ಷದ ಒಂದು ಕೊಂಬೆಯನ್ನು ಮುರಿದುಕೊಂಡು ಜೀವಜಲವನ್ನು ತೆಗೆದುಕೊಂಡು ಪಕ್ಷಿಯೊಂದಿಗೆ ಹಿಂತಿರುಗಿದಳು. ದಾರಿಯುದ್ದಕ್ಕೂ ಇದ್ದ ಶಿಲಾವಿಗ್ರಹಗಳಮೇಲೆ ಒಂದೊಂದು ತೊಟ್ಟು ಜೀವಜಲವನ್ನು ಚಿಮಿಕಿಸುತ್ತಾ ಬಂದಳು. ಶಿಲಾವಿಗ್ರಹಗಳೆಲ್ಲವೂ ರಾಜಕುಮಾರರಾದರು. ಆ ಸಮೂಹದಲ್ಲಿ ಅವಳ ಸಹೋದರರೂ ಇದ್ದರು. ಮೂವರೂಕಲೆತು ಅವರ ತೋಟಕ್ಕೆ ಹಿಂತಿರುಗಿದರು. ತೋಟಕ್ಕೆ ಮಾತಾಡುವ ಪಕ್ಷಿ ಬಂದಕೂಡಲೇ ಎಲ್ಲೆಲ್ಲಿಂದಲೋ ಹಾಡುವ ಪಕ್ಷಿಗಳು ಬಂದು ಉದ್ಯಾನದಲ್ಲಿ ಸಂಸಾರ ಹೂಡಿ ವರ್ಷದಾದ್ಯಂತವೂ ಹಾಡತೊಡಗಿದುವು. ಹಾಡುವವೃಕ್ಷದ ಕೊಂಬೆಯನ್ನು ನೆಟ್ಟಕೂಡಲೇ ಅದರ ಎಲೆಗಳು ಹಾಡಲು ಮೊದಲುಮಾಡಿದುವು. ಹಾಡು ಕೇಳಲು ಮಂದಮಾರುತ ತೋಟವನ್ನು ಆಶ್ರಯಿಸಿತು. ಒಂದು ತೊಟ್ಟು ಜೀವಜಲವನ್ನು ಹಾಕಿದ ಕೂಡಲೇ ನೀರಿನಕಾಲುವೆಗಳೆಲ್ಲ ಜಳಜಳ ರವದಿಂದ ಹರಿಯತೊಡಗಿದುವು.

ಸುಹಾಸಿನಿಯ ತೋಟದ ಮಹಿಮೆ ರಾಜನ ಕಿವಿಗೂ ಬಿತ್ತು. ತನ್ನ ಪತ್ನಿ ಮೂರನೇಯ ಸಲ ಒಂದು ಪ್ರಾಣಿಯನ್ನು ಹಡೆದಳೆಂಬ ವಾರ್ತೆ ಕೇಳಿ ರಾಜನು ಆಕೆಯನ್ನು ಸೆರೆಮನೆ

ಯಲ್ಲಿಡಿಸಿದ್ದನು. ಅಂದಿನಿಂದ ಅವನಿಗೆ ಸಂತೋಷವೆಂಬುದು ದೂರವಾಯಿತು. ಸದಾ ವ್ಯಾಕುಲಚಿತ್ತನಾಗಿರುತ್ತಿದ್ದನು. ಸುಹಾಸಿನಿಯ ವಿಶಿಷ್ಟವಾದ ತೋಟದಲ್ಲಿ ಕೊಂಚ ಹೊತ್ತು ಕುಳಿತುಕೊಂಡರೆ ತನ್ನ ಮನಸ್ಸಿನ ಭಾರ ಹಗುರವಾಗಬಹುದೆಂದು ರಾಜನು ಒಂದು ದಿನ ಉದ್ಯಾನವನಕ್ಕೆ ಹೋದನು.

ಆಗ ಸುಹಾಸಿನಿಯೊಬ್ಬಳೇ ಇದ್ದಳು. ಅವಳ ಸಹೋದರರು ಬೇಟೆಗೆ ಹೋಗಿದ್ದರು. ರಾಜನು ತನ್ನ ಅತಿಥಿಯಾಗಿ ಬಂದಿರುವನೆಂದು ತಿಳಿದು ಅವಳು ಕಂಗೆಟ್ಟಳು. ಕೂಡಲೇ ಅವಳು ಮಾತಾಡುವ ಪಕ್ಷಿಯ ಬಳಿಗೆ ಹೋಗಿ "ಪಕ್ಷಿಯೇ, ಪಕ್ಷಿಯೇ, ರಾಜನಿಗೆ ಏನು ಅಡಿಗೆ ಮಾಡಿಬಡಿಸಲಿ?" ಎಂದು ಸಲಹೆ ಕೇಳಿದಳು.

"ಮುತ್ತುಗಳು ತುಂಬಿದ ಕಜ್ಜಾಯ ಮಾಡು" ಎಂದಿತು ಪಕ್ಷಿ.

ಸುಹಾಸಿನಿ ಪಕ್ಷಿಯ ಸಲಹೆಯಂತೆ ಕಜ್ಜಾಯ ಮಾಡಿ ರಾಜನ ಮುಂದಿಟ್ಟಳು. ರಾಜನು ಒಂದು ಚೂರು ಕಜ್ಜಾಯವನ್ನು ಮುರಿದು ನೋಡಿ "ಇದೇನಿದು, ಇದರಲ್ಲಿ ಮುತ್ತುಗಳಿವೆ. ಇಂತಹ ಭಕ್ಷ್ಯವನ್ನು ನಾನೆಂದೂ ನೋಡಿಲ್ಲವಲ್ಲಾ" ಎಂದನು.

"ರಾಣಿಯ ಗರ್ಭದಲ್ಲಿ ನಾಯಿ, ಬೆಕ್ಕು, ಇಲಿಗಳು ಹುಟ್ಟುವುದೆಂದರೇನು ಮಹಾಪ್ರಭು" ಎಂದು ಕೇಳಿತು ಪಕ್ಷಿ.

ರಾಜನಿಗೆ ಎದೆ ದಸರ್ ಎಂದಿತು. "ನನ್ನ ಹೆಂಡತಿ ಮಕ್ಕಳನ್ನು ಹೆಡದಳೇ? ಅವರೇನಾದರು? ಎತ್ತ ಹೋದರು? ಹೇಳಿ ಪುಣ್ಯ ಕಟ್ಟಿಕೊ, ಪಕ್ಷಿಯೇ" ಎಂದು ಕಾತುರಸ್ವರದಲ್ಲಿ ಕೇಳಿದನು. ಸರಿಯಾಗಿ ಅದೇ ಸಮಯಕ್ಕೆ ಸುಜಾತ, ಸುಕೇತರು ಅಲ್ಲಿಗೆ ಬಂದರು.

"ಇವರೇ ನಿನ್ನ ಮಕ್ಕಳು" ಎಂದಿತು ಪಕ್ಷಿ.

ರಾಜನ ಕಣ್ಣಿಂದ ಆನಂದ ಬಾಷ್ಪಗಳು ಜಾರಿದುವು. ಅವನು ತನ್ನ ಮಕ್ಕಳನ್ನು ಬಿಗಿದಪ್ಪಿಕೊಂಡನು. ತನ್ನೊಂದಿಗೆ ಅವರನ್ನು ಅರಮನೆಗೆ ಕರೆದುಕೊಂಡು ಹೋದನು. ತನ್ನ ಪತ್ನಿಯನ್ನು ಸೆರೆಮನೆಯಿಂದ ಬಿಡುಗಡೆಮಾಡಿ ತನ್ನ ಅನುತಾಪವನ್ನು ತೋಡಿಕೊಂಡನು. ಅಕ್ಕಂದಿರು ತನಗೆ ಅಪಾರದ್ರೋಹ ಮಾಡಿದ್ದರೂ ಸಹ ರಾಣಿ ಅವರನ್ನು ಕ್ಷಮಿಸಿದಳು.





# ಅವಳಿಜವಳಿಗಳು

ಪೂರ್ವಕಾಲದಲ್ಲಿ ಕಾಂಚನನಗರದಲ್ಲಿ ಧನಪಾಲನೆಂಬ ವರ್ತಕನಿದ್ದನು. ಆತನು ವ್ಯಾಪಾರದನಿಮಿತ್ತ ಸ್ವರ್ಣದ್ವೀಪಕ್ಕೆ ಹೋಗುವಾಗ ತನ್ನ ಹೆಂಡತಿಯನ್ನು ಸಂಗಡ ಕರೆದುಕೊಂಡು ಹೋದನು. ಅವರು ಅಲ್ಲಿ ಒಂದು ವರ್ಷಕಾಲ ಇರಬೇಕಾಯಿತು. ಆ ಸಮಯದಲ್ಲಿ ಧನಪಾಲನ ಹೆಂಡತಿ ಅವಳಿಮಕ್ಕಳನ್ನು ಹೆತ್ತಳು. ಗಂಡುಶಿಶುಗಳು. ಒಂದೇ ಹೋಲಿಕೆ. ಧನಪಾಲನು ಅವೆರಡಕ್ಕೂ ಸಣ್ಣಮಾಧವ, ದೊಡ್ಡಮಾಧವ ಎಂದು ಹೆಸರಿಟ್ಟನು.

ಧನಪಾಲನ ಹೆಂಡತಿ ಅವಳಿಮಕ್ಕಳನ್ನು ಪಡೆದಂದೇ ಸ್ವರ್ಣದ್ವೀಪದಲ್ಲಿ ಅವರ ಮನೆಗೆ ಸನಿಯದಲ್ಲಿದ್ದ ಬಡವನೊಬ್ಬನ ಹೆಂಡತಿ ಸಹ ಅವಳಿಮಕ್ಕಳನ್ನು ಹೆತ್ತಳು. ಅವೂ ಗಂಡು ಮಕ್ಕಳು. ಅವರೂ ಸಹ ಒಂದೇ ರೀತಿಯಿದ್ದರು. ಆ ಬಡವನು ಧನಪಾಲನಬಳಿಗೆ ಬಂದು "ಸ್ವಾಮಿ, ನಮ್ಮ ಹೊಟ್ಟೆಪಾಡು ಕಳೆಯುವುದೇ ಕಷ್ಟವಾಗಿದೆ. ಈ ಮಕ್ಕಳನ್ನು ಸಾಕಲು ನನಗೆ ಚೈತನ್ಯವಿಲ್ಲ. ನಿಮ್ಮ ಮಕ್ಕಳೊಂದಿಗೆ ಇವರನ್ನೂ ಸಹ ಸಾಕಿಕೊಳ್ಳಿ. ದೊಡ್ಡವರಾದಮೇಲೆ ನಿಮ್ಮ ಕುಮಾರರಿಗೆ ಸೇವೆ ಮಾಡಿಕೊಂಡಿರುತ್ತಾರೆ" ಎಂದು ಪ್ರಾರ್ಥಿಸಿದನು. ಧನಪಾಲನು ಆ ಬಡವನಿಗೆ ಸ್ವಲ್ಪ ಹಣವನ್ನು ಕೊಟ್ಟು, ಆ ಅವಳಿಮಕ್ಕಳನ್ನೂ ತನ್ನ ವಶಕ್ಕೆ ತೆಗೆದುಕೊಂಡು ಪೋಷಿಸುತ್ತಿದ್ದನು. ಅವರಿಬ್ಬರಿಗೆ ದೊಡ್ಡರಾಮ ಸಣ್ಣರಾಮ ಅಂತ ಹೆಸರಿಟ್ಟನು.

ಈ ಅವಳಿಜವಳಿಗಳು ಹುಟ್ಟಿದ ಕೆಲವಾರು ತಿಂಗಳಿಗೆ ಧನಪಾಲನು ಸ್ವರ್ಣದ್ವೀಪಕ್ಕೆ ಬಂದ ಕೆಲಸ ಮುಗಿಯಿತು. ಆತನು ಕಾಂಚನನಗರಕ್ಕೆ ಹೊರಟನು. ಆದರೆ ದುರದೃಷ್ಟವಶಾತ್ ನಡುಸಮುದ್ರದಲ್ಲಿ ಬಿರುಗಾಳಿ ಬೀಸಿತು. ನೌಕೆ ದಾರಿತಪ್ಪಿ ಒಂದು ಬಂಡೆಗೆ ಬಡಿದು ಚೂರುಚೂರಾಯಿತು. ಧನಪಾಲನೂ, ದೊಡ್ಡಮಾಧವ ಮತ್ತು ದೊಡ್ಡರಾಮರು ಒಂದು ಗುಂಪಾಗಿಯೂ, ಧನಪಾಲನ ಹೆಂಡತಿ, ಸಣ್ಣಮಾಧವ ಮತ್ತು ಸಣ್ಣರಾಮರು ಮತ್ತೊಂದು ಗುಂಪಾಗಿಯೂ ಸೀಳಿಹೋದರು.

ಎಚ್. ಆರ್. ಮುಳಿಬೈಲು



ಸಮುದ್ರತೀರದಲ್ಲಿದ್ದ ಕೆಲವು ಹಳ್ಳಿಗರು ಧನಪಾಲನ ಹೆಂಡತಿಯನ್ನೂ ಆಕೆಯ ಸಂಗಡಿದ್ದ ಮಕ್ಕಳಿಬ್ಬರನ್ನೂ ಕಾಪಾಡಿ ರುದ್ರಪುರವೆಂಬ ನಗರಕ್ಕೆ ತಲುಪಿಸಿದರು. ಧನಪಾಲನು ಒಂದು ತೆಪ್ಪದ ಸಹಾಯದಿಂದ ತನ್ನೊಂದಿಗಿದ್ದ ಮಕ್ಕಳನ್ನು ಕಾಪಾಡಿಕೊಂಡು ಮತ್ತೊಂದು ದಡವನ್ನು ತಲುಪಿ, ಅತಿ ಪ್ರಯಾಸದಿಂದ ಕಾಂಚನನಗರವನ್ನು ಸೇರಿಕೊಂಡನು.

ಇದು ನಡೆದು ಹದಿನೆಂಟು ವರ್ಷಗಳಾದುವು. ರುದ್ರಪುರವನ್ನು ಸೇರಿದ ಸಣ್ಣ ಮಾಧವನು ಆ ದೇಶದ ಅರಸನ ಆಸ್ಥಾನದಲ್ಲಿ ನೌಕರಿಗೆ ಸೇರಿದನು. ಯುದ್ಧದಲ್ಲಿ ಶಕ್ತಿ ಸಾಹಸಗಳನ್ನು ತೋರಿ ಕೀರ್ತಿಪ್ರತಿಷ್ಠೆಗಳನ್ನು ಗಳಿಸಿದನು. ಮಂಜರಿಯೆಂಬ ಶ್ರೀಮಂತರ ಕನ್ಯೆಯನ್ನು ವಿವಾಹವಾದನು. ಅವನ ನೌಕರ ಸಣ್ಣರಾಮನು ಗಂಗೆ ಎಂಬುವಳನ್ನು ವಿವಾಹವಾಗಿ, ಯಜಮಾನನ ಮನೆಯಲ್ಲೇ ವಾಸಮಾಡಿಕೊಂಡಿದ್ದನು. ಗಂಗೆ ಮನೆಕೆಲಸಗಳನ್ನೂ ನೋಡಿಕೊಂಡು, ಮಂಜರಿಯ ನೆಚ್ಚಿನ ದಾಸಿಯಾದಳು.

ಧನಪಾಲನ ಸಂಗಡವಿದ್ದ ದೊಡ್ಡಮಾಧವನಿಗೆ ತನಗೊಬ್ಬ ಸಹೋದರನಿರುವನೆಂಬ ಅಂಶ ತಿಳಿಯಿತು. ಹಸುಳೆಯಾಗಿರುವಾಗಲೇ ಕಡಲಮೇಲಿದ್ದ ಪ್ರಚಂಡ ಮಾರುತದ ದೆಸೆಯಿಂದ ತಾಯಿಯೊಂದಿಗೆ ತಮ್ಮನೂ ನಾಪತ್ತೆಯಾದನೆಂದು ತಿಳಿಯಿತು. ಅವನು ತನ್ನ ನೌಕರ ರಾಮನೊಂದಿಗೆ ಅವರನ್ನು ಅರಸುತ್ತಾ ಹೋದನು. ಎಷ್ಟು ದಿನಗಳಾದರೂ ಅವರು ಕಾಂಚನನಗರಕ್ಕೆ ಹಿಂತಿರುಗಲಿಲ್ಲ. ಐದು ವರ್ಷಗಳಾದುವು. ಧನಪಾಲನಿಗೆ ಪುತ್ರ ವಿಯೋಗ ಸಹಿಸಲಸಾಧ್ಯವಾಯಿತು. ಆತನು ತನ್ನ ವ್ಯಾಪಾರ, ಮನೆಮಠಗಳನ್ನು ತೊರೆದು ಮಗನನ್ನು ಹುಡುಕುತ್ತಾ ತಾನೂ ದೇಶಾಂತರ ಹೊರಟನು.

ಮನೆಬಿಟ್ಟು ಎರಡುವರ್ಷಗಳ ನಂತರ ಧನಪಾಲನು ರುದ್ರಪುರವನ್ನು ಸೇರಿಕೊಂಡನು. ಕೂಡಲೇ ರಾಜಭಟರು ಆತನನ್ನು ಪ್ರಶ್ನಿಸಿ ಕಾಂಚನ ನಗರವಾಸಿಯೆಂದು ತಿಳಿದು ಆತನನ್ನು ರಾಜನಬಳಿಗೆ ಕರೆದೊಯ್ದರು. ಯಾಕೆಂದರೆ ಕೆಲವುದಿನಗಳಿಂದ ಕಾಂಚನನಗರ ಮತ್ತು ರುದ್ರಪುರಗಳ ನಡುವೆ ವೈಮನಸ್ಸುಂಟಾಗಿತ್ತು.

ರುದ್ರಪುರದಲ್ಲಿದ್ದ ಕಾಂಚನ ನಗರವಾಸಿಗಳನ್ನೆಲ್ಲಾ ಗಡೀಪಾರುಮಾಡಿದ್ದರು; ಕೆಲವರನ್ನು ಸೆರೆಮನೆಯಲ್ಲಿ ಕೂಡಿಹಾಕಿದ್ದರು. ಈ ವಿಷಯ ಧನಪಾಲನಿಗೆ ತಿಳಿಯದು. ತಾನು ತನ್ನ ಹಿರಿಯಮಗನನ್ನು ಹುಡುಕಿಕೊಂಡು ದೇಶದೇಶಗಳಲ್ಲಿ ಅಲೆಯುತ್ತಿರುವೆನೆಂದೂ, ಅವನು ಏಳು ವರ್ಷಗಳ ಹಿಂದೆ ತನ್ನ ಸಹೋದರನನ್ನು ಪತ್ತೆಮಾಡಲು ಹೋದನೆಂದೂ ರಾಜನಿಗೆ ತಿಳಿಸಿದನು.

"ಕಾನೂನಿನಪ್ರಕಾರ ನಿಮ್ಮನ್ನು ಬಂಧನದಲ್ಲಿಡಬೇಕು. ಆದರೆ ನೀವು ವಯೋವೃದ್ಧರೂ, ಸಂಭಾವಿತರೂ ಆಗಿರುವಿರಿ. ಆದುದರಿಂದ ಸಾವಿರ ಹೊನ್ನುಗಳನ್ನು ತಂದು ಕೇವಣಿ ಮಾಡಿದರೆ ನಿಮಗೆ ಕಾರಗೃಹವಾಸ ತಪ್ಪುತ್ತದೆ" ಎಂದು ಹೇಳಿ ರಾಜನು ಧನಪಾಲನೊಂದಿಗೆ ಒಬ್ಬ ಭಟನನ್ನು ಕಳುಹಿಸಿದನು.

ಧನಪಾಲನು ರುದ್ರಪುರವನ್ನು ಸೇರಿದ ದಿನವೇ ದೊಡ್ಡಮಾಧವ ಮತ್ತು ರಾಮರೂ ಆ ನಗರವನ್ನು ತಲುಪಿದರು. ಆದರೆ ತಾವು ಕಾಂಚನನಗರವಾಸಿಗಳೆಂದು ಹೇಳಿದರೆ ಸೆರೆಮನೆವಾಸ ಖಂಡಿತವೆಂದು ಅವರಿಗೆ ತಿಳಿದಿತ್ತು. ಕಾಂಚನನಗರದಿಂದ ಬಂದ ಸಂಭಾವಿತನೊಬ್ಬನನ್ನು ರಾಜಭಟರು ಸ್ವಲ್ಪಹೊತ್ತಿನ ಮುಂಚೆ ಬಂಧಿಸಿದರೆಂಬ ಸುದ್ದಿ ಕೇಳಿ ಮಾಧವನು ವ್ಯಾಕುಲಗೊಂಡನು. ಆದರೆ ಅವನು ತನ್ನ ತಂದೆಯೆಂದು ತಿಳಿಯದುದರಿಂದ ಆಕುರಿತು ಯಾವ ಪ್ರಯತ್ನವನ್ನೂ ಮಾಡಲಿಲ್ಲ.



ಆ ಊರಿನಲ್ಲೆ ಉನ್ನತ ಉದ್ಯೋಗದಲ್ಲಿದ್ದ ಸಣ್ಣಮಾಧವನು ತನ್ನ ತಂದೆಗೆ ಸಹಾಯ ಮಾಡಬಹುದಿತ್ತು. ಆದರೆ ಅವನಿಗೆ ತನ್ನ ತಂದೆಯ ಅಥವಾ ಅಣ್ಣನ ವಿಷಯವಷ್ಟೇ ಏಕೆ ತಾಯಿಯ ವಿಷಯವೂ ತಿಳಿಯದು. ಇದಕ್ಕೊಂದು ಪ್ರಬಲ ಕಾರಣವಿತ್ತು. ಅವನನ್ನೂ, ಅವನ ನೌಕರ ರಾಮುನನ್ನೂ ಮತ್ತು ಧನಪಾಲನ ಪತ್ನಿಯನ್ನೂ ಕಾಪಾಡಿದ ಹಳ್ಳಿಗರು ಧನಲೋಭದಿಂದ ಮಕ್ಕಳನ್ನು ತಾಯಿಯಿಂದ ಬೇರೆಮಾಡಿ, ಒಬ್ಬ ಸಾಮಂತನಿಗೆ ಮಾರಿಬಿಟ್ಟಿದ್ದರು. ಆ ಸಾಮಂತನಬಳಿ ಬೆಳೆದು ದೊಡ್ಡವನಾದ ಸಣ್ಣಮಾಧವನನ್ನು ಒಂದು ದಿನ ರಾಜನು ಕಂಡು ಮೆಚ್ಚಿ ಉನ್ನತ ಪದವಿಯನ್ನು ಅವನಿಗೆ ದಯಪಾಲಿಸಿದ್ದನು.

ರುದ್ರಪುರವನ್ನು ಸೇರಿದ ದೊಡ್ಡಮಾಧವ ಮತ್ತು ರಾಮರು ಅಡಗೂಲಜ್ಜಿಯ ಮನೆಗೆ ಹೋದರು. ತಮ್ಮ ಬಟ್ಟೆಬರೆಗಳನ್ನು ಅಲ್ಲಿಟ್ಟು ನಗರದಲ್ಲಿ ಸುತ್ತಾಡಿಕೊಂಡು ಬರಲು ಹೊರಟರು. ಕೊಂಚಹೊತ್ತು ಸುತ್ತಾಡಿದ ನಂತರ ದೊಡ್ಡಮಾಧವನು ತನ್ನ ನೌಕರ ರಾಮನ ಕೈಗೆ ಕೊಂಚ ಹಣವನ್ನು ಕೊಟ್ಟು "ಲೋ, ರಾಮು, ಇದನ್ನು ಅಜ್ಜಿಗೆ ಕೊಟ್ಟು ಅಡಿಗೆ ಸಿದ್ಧಪಡಿಸುವಂತೆ ಹೇಳು. ನಾನು ಇನ್ನೊಂದೆರಡು ರಸ್ತೆಗಳಲ್ಲಿ ಅಲೆದಾಡಿ ಊಟದ ಹೊತ್ತಿಗೆ ಬರುತ್ತೇನೆ" ಎಂದನು.

ರಾಮನು ಹೋದ ಕೆಲವಾರು ನಿಮಿಷಗಳಿಗೆಲ್ಲಾ ಅದೇ ರಾಮನು ತನ್ನಬಳಿಗೆ ಹಿಂತಿರುಗಿ ಬರುತ್ತಿರುವುದು ದೊಡ್ಡಮಾಧವನಿಗೆ ಕಾಣಿಸಿತು. ಹಾಗೆ ಬಂದವನು ಸಣ್ಣರಾಮು. ಆ ವಿಷಯ ತಿಳಿಯದ ಮಾಧವನು "ಏಕೋ, ಆಗಲೇ ಬಂದುಬಿಟ್ಟೆ? ನಾನು ಕೊಟ್ಟ ಹಣವೇನುಮಾಡಿದೆ?" ಎಂದು ಕೇಳಿದನು. ಇಬ್ಬರು ರಾಮರೂ ಒಂದೇ ರೂಪತಾನೇ! ದೊಡ್ಡ ಮಾಧವನು ಭ್ರಮೆಗೊಂಡಂತೆ ಸಣ್ಣರಾಮನೂ ಭ್ರಮೆಗೊಂಡನು. ಅವನು ಮಾಧವನನ್ನು ನೋಡಿ "ಅಮ್ಮಾವರು ಊಟಕ್ಕೆ ಬೇಗ ನಿಮ್ಮನ್ನು ಕರೆತರುವಂತೆ ಹೇಳಿದರು. ಬನ್ನಿ ಹೋಗೋಣ" ಎಂದನು.

"ಸಾಕು ನಿನ್ನ ಹಾಸ್ಯ. ಯಾವುದಕ್ಕೂ ಸಮಯಸಂದರ್ಭವಿರಬೇಕು. ಹೂಂ, ಹಣ ವೇನು ಮಾಡಿದೆ?" ಎಂದು ಗದರಿದ ಹಿರಿಯ ಮಾಧವ. "ಏನು ಸ್ವಾಮಿಯಿದು ವಿಚಿತ್ರ.



ಅಮ್ಮಾವರು ತಮ್ಮನ್ನು ಕರೆತರುವಂತೆ ನನಗೆ ಹೇಳಿದರು. ನನಗೆ ಹಣದ ವಿಷಯವೇನೂ ತಿಳಿಯದು " ಎಂದ ರಾಮು.

" ಯಾರೋ ಅದು ಅಮ್ಮಾವರು ?" ವಿಸ್ಮಿತನಾಗಿ ನುಡಿದ ದೊಡ್ಡಮಾಧವ.

" ನಿಮ್ಮ ಸಹಧರ್ಮಿಣಿ ಸ್ವಾಮಿ " ಹಲ್ಲು ಕಿರಿದ ರಾಮು. ಹಿರಿಯ ಮಾಧವನಿಗಿನ್ನೂ ಮದುವೆಯಾಗಿರಲಿಲ್ಲ. ಅವನು " ಮೊದಲು ಹಣವೇನುಮಾಡಿದೆಯೋ ಹೇಳೋ ಮುಠ್ಠಾಳ. ಹುಚ್ಚುಚ್ಚಾರಿ ಮಾತಾಡಿದರೆ ಹಲ್ಲು ಉದುರಿಸಿ ಬಿಟ್ಟೇನು," ಎಂದು ಅವಡುಕಚ್ಚಿದನು.

" ಪರಿಹಾಸ್ಯಮಾಡುತ್ತಿರುವುದು ನೀವು, ನಾನಲ್ಲ. ಉಟವಾದನಂತ ಮನಸ್ಸಿಗೆ ಬಂದಷ್ಟು ಬಯ್ಯುವಿರಂತೆ. ಈಗ ಮನೆಗೆ ಬನ್ನಿ" ಎಂದು ಸಣ್ಣರಾಮು ಕೇಳಿಕೊಂಡ. ದೊಡ್ಡಮಾಧವನ ಕೋಪ ನೆತ್ತಿಗೇರಿತು. ರಾಮುನ ಕಪಾಲಕ್ಕೆ ಎರಡೇಟು ಕೊಟ್ಟನು. ಅವನು ಕಣ್ಣೀರು ಸುರಿಸುತ್ತಾ ಮನೆಗೆ ಹೋಗಿ ಮಂಜರಿಯೊಂದಿಗೆ " ಅಮ್ಮಾ, ಯಜಮಾನರನ್ನು ಮನೆಗೆ ಬರುವಂತೆ ಹೇಳಿದರೆ ಹೊಡೆದು ಕಳುಹಿಸಿದರು " ಎಂದನು.

ಮಂಜರಿ ಮೊದಲೇ ಸಂಶಯ ಸ್ವಭಾವದವಳು. ಅನುಮಾನ ಮತ್ತು ಅಸೂಯೆ ತಂಬಿದ ಮಂಜರಿ ಸದಾ ಗಂಡನನ್ನು ಗೋಳು ಹೊಯ್ದುಕೊಳ್ಳುತ್ತಿದ್ದಳು. ಮಂಜರಿಗೆ ಮಾಲತಿ ಎಂಬ ಸಹೋದರಿಯೊಬ್ಬಳಿದ್ದಳು. ತನ್ನ ಅಕ್ಕನು ಭಾವನನ್ನು ವೃಥಾ ಕಾಡಿಸುವುದನ್ನು ಕಂಡು ಅವಳು ರೋಸಿಹೋಗಿದ್ದಳು.





ಸಣ್ಣರಾಮನ ಮಾತು ಕೇಳಿ ಮಂಜರಿ ತನ್ನ ಗಂಡನ ಶೀಲವನ್ನು ಶಂಕಿಸಿದಳು. ಅವನು ಅನ್ಯಸ್ತ್ರೀಯೊಬ್ಬಳನ್ನು ಪ್ರೀತಿಸುತ್ತಿರಬೇಕೆಂದು ಅವಳು ಊಹಿಸಿದಳು. ಅಂತಲೇ ಊಟಕ್ಕೆ ಬರಲಿಲ್ಲ! ಗಂಡನಿಗೆ ಛೀಮಾರಿ ಹಾಕಬೇಕೆಂದು ಆಕೆ ಹೊರಗೆ ಬಂದಳು.

ಇಷ್ಟರಲ್ಲಿ ದೊಡ್ಡಮಾಧವನು ಮನೆ ಸೇರಿಕೊಂಡು ಅಲ್ಲಿ ತನ್ನ ನೌಕರನೂ, ಹಣವೂ ಸುರಕ್ಷಿತವಾಗಿರುವುದನ್ನು ಕಂಡನು. ಸ್ವಲ್ಪ ಹೊತ್ತಿಗೆ ಮುಂಚೆ ತನ್ನೊಂದಿಗೆ ಅರ್ಥವಿಲ್ಲದ ಮಾತುಗಳನ್ನಾಡಿದನೆಂದು ರಾಮನನ್ನು ಛೀಮಾರಿ ಹಾಕುವಷ್ಟರಲ್ಲಿ ಮಂಜರಿ ಅಲ್ಲಿಗೆ ಬಂದಳು. ಅವನು ತನ್ನ ಪತಿ ಎಂತಲೇ ಅವಳು ಭಾವಿಸಿದಳು. ತನ್ನೆಡೆಗೆ ವಿಚಿತ್ರವಾಗಿ ನೋಡುತ್ತಿದ್ದ ದೊಡ್ಡಮಾಧವನನ್ನು ಕುರಿತು "ಅದೇಕೆ ಪರಕೀಯಳನ್ನು ನೋಡಿದಂತೆ ನೋಡುತ್ತಿರುವಿರಿ. ನಾನಾಗಲೇ ನಿಮಗಷ್ಟು ದೂರವಾದೆನೇ? ನಾನೇನು ಅಪರಾಧ ಮಾಡಿದೆ?" ಎಂದಳು.

"ನೀವು ಮಾತನಾಡುತ್ತಿರುವುದು ನನ್ನೊಂದಿಗಲ್ಲವಷ್ಟೇ?" ಎಂದು ಮಾಧವನು ಕೇಳಿದನು. ತಾನು ಅವಳನ್ನು ಎಂದೂ ಕಂಡಿಲ್ಲವೆಂತಲೂ, ತಾನು ಕೇವಲ ಎರಡು ತಾಸುಗಳಹಿಂದೆ ಆ ನಗರಕ್ಕೆ ಬಂದಿರುವುದಾಗಿಯೂ ಹೇಳಿದನು. ಆದರೆ ಅವಳು ಅದನ್ನು ಒಪ್ಪುವಸ್ಥಿತಿಯಲ್ಲಿರಲಿಲ್ಲ. "ಈ ದಭಾವಣೆಗಳನ್ನು ಕಟ್ಟಿಟ್ಟು ನನ್ನೊಂದಿಗೆ ನೆಟ್ಟಗೆ ಮನೆಗೆ ಬನ್ನಿ" ಎಂದು ದರ್ಪದಿಂದ ನುಡಿದಳು. ಗತ್ಯಂತರವಿಲ್ಲದೆ ದೊಡ್ಡಮಾಧವನು ಮಂಜರಿಯಸಂಗಡ ಹೋದನು. ಮನೆಯಲ್ಲಿ ಮಂಜರಿ, ಮಾಲತಿಯರು ಅವನೊಂದಿಗೆ ಕುಳಿತು ಊಟಮಾಡಿದರು. ಅವನೊಂದಿಗೆ ಪತ್ನಿಯಂತೆ ನಡೆದುಕೊಂಡಳು ಮಂಜರಿ. ಮಾಲತಿ ಅವನನ್ನು "ಬಾವಾ" ಎಂದು ಕರೆದಳು. ತಾನು ಜಾಗ್ರತಾವಸ್ಥೆಯಲ್ಲಿರುವೆನೋ, ಸ್ವಪ್ನಾವಸ್ಥೆಯಲ್ಲಿರುವೆನೋ ಅವನಿಗೆ ತಿಳಿಯಲಿಲ್ಲ.

ದೊಡ್ಡಮಾಧವನೊಂದಿಗೆ ಬಂದ ದೊಡ್ಡರಾಮನಿಗೂ ಇದೇ ಅನುಭವವಾಯಿತು. ಗಂಗೆ ಅವನ ಸಹಧರ್ಮಿಣಿಯಂತೆ ನಡೆದುಕೊಂಡಳು. ಗಂಗೆ ಒಬ್ಬ ಗಯ್ಯಾಳಿ.

ಎಲ್ಲರೂ ಒಳಗೆ ಕುಳಿತು ಊಟಮಾಡು ತ್ತಿರುವ ಸಮಯದಲ್ಲಿ ಮಂಜರಿಯ ನಿಜಪತಿ ಸಣ್ಣಮಾಧವನು ತನ್ನ ಸೇವಕ ಸಣ್ಣರಾಮ ನೊಂದಿಗೆ ಬಂದು ಬಾಗಿಲು ತಟ್ಟಿದನು.

"ಯಾರದು?" ಎಂದು ಕೇಳಲು ಮಾಧವ ರಾಮರೆಂದು ಜವಾಬು ಬಂತು. "ಅವ ರಿಬ್ಬರೂ ಮನೆಯಲ್ಲೇ ಊಟಮಾಡುತ್ತಿದ್ದಾರೆ. ನೀವ್ಯಾರೋ ನಾವರಿಯೆವು. ಮುಂದಕ್ಕೆ ದಯಮಾಡಿ" ಎಂದು ನೌಕರನು ಹೇಳಿದನು.

ತನ್ನ ಹೆಂಡತಿ ಪರಪುರುಷನೊಂದಿಗೆ ಊಟ ಮಾಡುತ್ತಿರುವಳೆಂದು ಕೇಳಿ ಸಣ್ಣಮಾಧ ವನು ಉರಿದೆದ್ದನು.

ಊಟವಾದನಂತರ ಕುಂಟುನೆಪ ಹೇಳಿ ದೊಡ್ಡಮಾಧವ ಮತ್ತು ರಾಮರು ಅಲ್ಲಿಂದ ಹೊರಬಿದ್ದರು. ದೊಡ್ಡಮಾಧವನಿಗೆ ಮಾಲ ತಿಯ ನಡೆನುಡಿಗಳು ಮೆಚ್ಚಿಕೆಯಾದರೂ ಮಂಜರಿಯ ರೀತಿ ನೀತಿಗಳು ಬೇಸರವನ್ನುಂಟು ಮಾಡಿದುವು. ದೊಡ್ಡರಾಮನು ಗಯ್ಯಾಳಿ ಗಂಗೆಯ ವೇಷಭಾಷೆಗಳನ್ನು ನೋಡಿ ರೋಸಿ ಹೋದನು. ಅವರಿಬ್ಬರೂ ಕೊಂಚ ದೂರ ಹೋಗಲು ಅಕ್ಕಸಾಲಿಯೊಬ್ಬನು ಎದುರಾಗಿ, ದೊಡ್ಡಮಾಧವನನ್ನು ಕಂಡು ಸಣ್ಣಮಾಧವ ನೆಂದು ಭಾವಿಸಿ "ಮಾಧವ ಅವರೆ, ನಿಮ್ಮನ್ನು ಕಾಣಲೇ ಬರುತ್ತಿದ್ದೆ. ಚಿನ್ನದ ಸರ ಮಾಡಿ ಕೊಂಡು ಬಂದಿದ್ದೇನೆ. ತೆಗೆದುಕೊಳ್ಳಿ" ಎಂದು ಅವನ ಕೈಯಲ್ಲಿ ಚಿನ್ನದ ಸರವನ್ನಿಟ್ಟನು. ದೊಡ್ಡಮಾಧವನಿಗೆ ವಿಸ್ಮಯವಾಯಿತು.



"ಏನಿದು? ಇದನ್ನು ನನಗೇಕೆ ಕೊಡು ತ್ತಿರುವಿರಿ?" ಎಂದು ಕೇಳಿದನು.

ಅಕ್ಕಸಾಲಿ ನಕ್ಕು "ಆಗಲೇ ಮರೆತು ಬಿಟ್ಟರೇನು. ಈ ಸರ ಮಾಡಿಕೊಂಡು ಬರು ವಂತೆ ನನಗೆ ಹೇಳಿರಲಿಲ್ಲವೇ? ಹಣವನ್ನು ನಂತರ ಕೊಡುವಿರಂತೆ" ಎಂದು ಹೇಳಿ ಹೊರಟುಬಿಟ್ಟನು. ದೊಡ್ಡಮಾಧವನು ರಾಮನಕಡೆ ತಿರುಗಿ "ರಾಮ, ನಾನು ಈ ನಗರದಲ್ಲಿ ಒಂದು ಕ್ಷಣವಾದರೂ ಇರಲಾರೆ. ಕೂಡಲೇ ಮನೆಗೆ ಹೋಗಿ ನಮ್ಮ ಸಾಮಾನು ಗಳನ್ನೆಲ್ಲಾ ರೇವಿನಬಳಿಗೆ ಸಾಗಿಸಿಕೊಂಡು ಬಾ. ಹೊರಟುಬಿಡೋಣ" ಎಂದನು.

ಅತ್ತ ಅಕ್ಕಸಾಲಿಗೆ ಕಷ್ಟಬಂತು. ಆತ ದೊಡ್ಡ ಮಾಧವನಿಗೆ ಒಡವೆ ಕೊಟ್ಟು ಹೋದ ಕೊಂಚ

ಹೊತ್ತಿಗೆಲ್ಲಾ ಬಾಕಿದಾರರು ಅವನನ್ನು ನಿಲ್ಲಿಸಿ ರಾಜಭಟರಿಗೆ ಹಿಡಿದುಕೊಟ್ಟರು.

ಆ ಸಮಯಕ್ಕೆ ಸಣ್ಣಮಾಧವನು ಅತ್ತ ಕಡೆ ಹೋಗುತ್ತಿದ್ದನು. ಅಕ್ಕಸಾಲಿ ಅವನನ್ನು ನೋಡಿ "ದೇವರಂತೆ ಬಂದಿರಿ ಸ್ವಾಮಿ. ಸ್ವಲ್ಪಹೊತ್ತಿಗೆ ಮುಂಚೆ ನಿಮಗೆ ಕೊಟ್ಟ ಸರದ ಹಣ ಕೊಟ್ಟರೆ ಇವರ ಕಾಟದಿಂದ ಬಿಡುಗಡೆಯಾಗುತ್ತೇನೆ" ಎಂದನು.

ಸಣ್ಣಮಾಧವನು ದಿಗ್ಭ್ರಮೆಗೊಂಡು "ನೀನು ನನಗೆ ಚಿನ್ನದ ಸರವನ್ನು ಎಂದು ಕೊಟ್ಟೆ, ಯಾವಾಗ ಕೊಟ್ಟೆ. ಶುದ್ಧ ಸುಳ್ಳು" ಎಂದನು. ಅಕ್ಕಸಾಲಿಗನು ಉದ್ರೇಕಗೊಂಡು "ನನ್ನ ಹತ್ತಿರ ಒಡವೆ ತೆಗೆದುಕೊಂಡು ಈಗ ಮೋಸಮಾಡಲು ಪ್ರಯತ್ನಿಸುತ್ತಿದ್ದಾನೆ ಈ ದೊಡ್ಡ ಮನುಷ್ಯ. ಇವನನ್ನೂ ಬಂಧಿಸಿ" ಎಂದು ರಾಜಭಟರಿಗೆ ಹೇಳಿದನು.

ರಾಜಭಟರು ಸಣ್ಣಮಾಧವನನ್ನೂ ಸಹ ಹಿಡಿದುಕೊಂಡರು. ಭಟರು ಅಕ್ಕಸಾಲಿಗನನ್ನೂ, ಸಣ್ಣಮಾಧವನನ್ನೂ ಸೆರೆಮನೆಗೆ ಕೊಂಡೊಯ್ಯುತ್ತಿರುವಾಗ ರಾಮನು ಬಂದನು. 'ಸಾಮಾನುಗಳೆಲ್ಲಾ ರೇವಿನಬಳಿ ಸೇರಿಸಿದ್ದೇನೆ. ಹಡಗು ಹೊರಡಲು ಸಿದ್ಧವಾಗಿದೆ' ಎಂದು ಹೇಳಲು ಯಜಮಾನನ ಬಳಿಗೆ ಬರುತ್ತಿದ್ದನು. ಸಣ್ಣಮಾಧವನು ಅವನನ್ನು ಕಂಡಾಕ್ಷಣ ತನ್ನ ನೌಕರನೆಂದೇ ಭಾವಿಸಿ "ಲೋ, ತಕ್ಷಣ ಮನೆಗೆ ಹೋಗಿ ಅಮ್ಮಾವರಿಂದ ಐನೂರು ವರಹಗಳನ್ನು ಕೇಳಿ ತೆಗೆದುಕೊಂಡು ಬಾ" ಎಂದನು.



ಆ ವ್ಯಕ್ತಿ ತನ್ನ ಒಡೆಯನಲ್ಲವೆಂಬ ಅಂಶ ರಾಮನಿಗೆ ತಿಳಿಯದು. ಮತ್ತೆ ಆ ಹಾಳು ಮನೆಗೇಕೆ ತನ್ನನ್ನು ಕಳುಹಿಸುತ್ತಿರುವನೋ ಅವನಿಗೆ ಅರ್ಥವಾಗಲಿಲ್ಲ. ಅವನು ಪ್ರತಿಯಾಡದೆ "ಅಪ್ಪಣೆ" ಎಂದನು. 'ಯಜಮಾನರು ಏನು ಹೇಳಿದರೂ ಮಾಡಿತೀರಬೇಕು. ನನ್ನ ಹಣೆಬರಹ' ಎಂದು ಗೊಣಗಿಕೊಂಡು ತಾವು ಹಿಂದೆ ಊಟಮಾಡಿದ ಮನೆಗೆ ಹೋದನು.

ತನ್ನ ಗಂಡನನ್ನು ರಾಜಭಟರು ಬಂಧಿಸಿರುವ ವಿಷಯ ತಿಳಿದಕೂಡಲೇ ಮಂಜರಿ ಐನೂರು ವರಹಗಳನ್ನು ತಕ್ಷಣ ರಾಮನ ಕೈಗೆ ಕೊಟ್ಟುಬಿಟ್ಟಳು. ರಾಮನು ಆ ಹಣವನ್ನು ತೆಗೆದುಕೊಂಡು ಬರುತ್ತಿರಲು ದಾರಿಯಲ್ಲಿ ಅವನಿಗೆ ದೊಡ್ಡಮಾಧವನು ಕಾಣಿಸಿದನು. ದೊಡ್ಡಮಾಧವನಿಗೆ ನಡೆದುದೆಲ್ಲವೂ ಕನಸಿನಂತೆ ತೋರುತ್ತಿತ್ತು. ರಸ್ತೆಯಲ್ಲಿ ಹೋಗುತ್ತಿದ್ದರೆ ಪ್ರತಿಯೊಬ್ಬರೂ ಅವನನ್ನು ನಿಲ್ಲಿಸಿ ಮಾತನಾಡಿಸುತ್ತಿದ್ದರು. ಕೆಲವರು ತನಗೆ ಹಣ ನಂತರ ಸಲ್ಲಿಸುವುದಾಗಿ ಹೇಳಿದರು. ಬಟ್ಟೆ ವ್ಯಾಪಾರಿಯೊಬ್ಬನು ಅವನನ್ನು ಕರೆದು "ರಾಯರೇ, ತಮಗಾಗಿ ಈ ಹೊಸ ಮಾದರಿಯ ಬಟ್ಟೆ ತರಿಸಿದ್ದೇನೆ" ಎಂದು ಹೇಳಿ ಕೆಲವಾರು ಥಾನು ಬಟ್ಟೆ ತೋರಿಸಿದನು. ಈ ಚೋದ್ಯವನ್ನು ಕಂಡು ದೊಡ್ಡಮಾಧವನು ಈ ನಗರದವರಿಗೆಲ್ಲಾ ಏನು ಕಾರಣದಿಂದಲೋ ಬುದ್ಧಿಭ್ರಮಣೆಯಾಗಿದೆಯೆಂದು ಭಾವಿಸಿದನು. ಉಳಿದವರ ವಿಷಯ ಹೇಗಾದರೂ ಇರಲಿ,





ತನ್ನ ನೌಕರ ರಾಮನಿಗೂ ಬುದ್ಧಿಕೆಟ್ಟಿರು ವಂತೆ ತೋರಿತು. ಯಾಕೆಂದರೆ ಅವನು ತನ್ನನ್ನು ನೋಡಿದಕೂಡಲೇ "ರಾಜಭಟರು ನಿಮ್ಮನ್ನು ಬಿಟ್ಟುಬಿಟ್ಟರೇ? ಮತ್ತೆ ಜುಲ್ಮಾನೆ ಹೇಗೆ ಕೊಟ್ಟರಿ. ಮನೆಯಿಂದ ಹಣ ತಂದಿದ್ದೇನೆ" ಎಂದು ಹಣದ ಥೈಲಿ ತೋರಿಸಿ ದನು. ದೊಡ್ಡಮಾಧವನು ಅವನ ಮಾತಿಗೆ ಕಿವಿಗೊಡುವುದರ ಬದಲು ಆಕಾಶದತ್ತ ನೋಡಿ "ದೇವದೇವ, ನನಗೆ ಮತಿಗೆಡದಂತೆ ಕಾಪಾಡು" ಎಂದು ಪ್ರಾರ್ಥಿಸಿದನು.

ಎಷ್ಟುಹೊತ್ತಾದರೂ ತನ್ನ ಗಂಡನು ಮನೆಗೆ ಬಾರದಿರಲು ಮಂಜರಿ ಸೆರೆಮನೆಗೆ ಹೋದಳು. ಅಧಿಕಾರಿಗಳಿಗೆ ಹಣ ಕೊಟ್ಟು ಗಂಡನನ್ನು ಬಿಡಿಸಿಕೊಂಡಳು. ಸಣ್ಣಮಾಧ ವನು ಅವಳನ್ನು ಪರಿಪರಿಯಾಗಿ ನಿಂದಿಸಿದನು. ಊಟದಹೊತ್ತಿಗೆ ಮನೆಗೆ ಬರಲು ಬಾಗಿಲು ತೆರೆಯಲಿಲ್ಲವೆಂತಲೂ, ರಾಜಭಟರಿಂದ ತಪ್ಪಿಸಿ ಕೊಳ್ಳಲು ಹಣ ಕೂಡಲೇ ಕಳುಹಿಸುವಂತೆ ಹೇಳಿದರೆ ಕಳುಹಿಸಲಿಲ್ಲವೆಂತಲೂ ನಿಷ್ಠೂರ ವಾಗಿ ಮಾತನಾಡಿದನು. ಅವನ ವಿಚಿತ್ರ ಮಾತುಗಳನ್ನು ಕೇಳಿ ಮಂಜರಿ ತನ್ನ ಗಂಡ ನಿಗೆ ಹುಚ್ಚು ಹಿಡಿಯಿತೆಂದುಕೊಂಡಳು. ನೌಕರ ರಾಮನೂಸಹ ತನ್ನ ಯಜಮಾನನ ಮಾತುಗಳಿಗೆ ಬೆಂಬಲಕೊಟ್ಟನು. ಆದುದರಿಂದ ಅವಳು ಅವರಿಬ್ಬರನ್ನೂ ಮನೆಗೆ ಕರೆದು ಕೊಂಡು ಹೋಗಿ, ಕತ್ತಲುಕೋಣೆಗೆ ತಳ್ಳಿ, ವೈದ್ಯನಿಗೆ ಸುದ್ದಿ ಕಳುಹಿಸಿದಳು.

ಮತ್ತೆ ಕೊಂಚಹೊತ್ತಿಗೆ ನೌಕರರು ಕೆಲ ವರು ಮಂಜರಿಯ ಬಳಿಗೆ ಬಂದು "ತಾಯಿ, ಯಜಮಾನರೂ ರಾಮನೂ ಕೋಣೆಯಿಂದ ತಪ್ಪಿಸಿಕೊಂಡಿದ್ದಾರೆ. ಪಕ್ಕದ ರಸ್ತೆಯಲ್ಲಿ ಅವರು ಯಾರೊಂದಿಗೋ ಮಾತನಾಡು ತ್ತಿರುವುದನ್ನು ಕಂಡೆವು" ಎಂದರು. ಮಂಜರಿ ಕೆಲವುಜನ ನೌಕರರೊಂದಿಗೆ ಪಕ್ಕದ ಬೀದಿಗೆ ಹೋದಳು. ಅಲ್ಲಿ ದೊಡ್ಡಮಾಧವ ಮತ್ತು ದೊಡ್ಡರಾಮ ಅಕ್ಕಸಾಲಿಗನೊಂದಿಗೆ ಮಾತ ನಾಡುತ್ತಿದ್ದರು.

ದೊಡ್ಡಮಾಧವನ ಕೊರಳಲ್ಲಿ ಅಕ್ಕಸಾಲಿ ಗನು ಕೊಟ್ಟ ಸರವಿತ್ತು.

"ಎಂಥಾ ಕೆಲಸ ಮಾಡಿದಿರಿ ರಾಯರೇ, ಸರ ತೆಗೆದುಕೊಂಡು ಇಲ್ಲವೆಂದು ಸಾಧಿಸಿದಿ

ರಲ್ಲಾ. ನನ್ನ ಹಣ ನನಗೆ ಆಗಲೇ ಕೊಟ್ಟು ಬಿಟ್ಟಿದ್ದರೆ ಈ ಹಗರಣವಾಗುತ್ತಿರಲಿಲ್ಲವಲ್ಲಾ" ಎಂದ ಅಕ್ಕಸಾಲಿಗ.

"ಸರ ಕೊಡುವಂತೆ ನಿನ್ನನ್ನು ನಾನು ಕೇಳಿದೆನೇ? ನೀನಾಗಿ ನೀನು ಸರವನ್ನು ನನ್ನ ಕೈಯಲ್ಲಿಟ್ಟು ಹೊರಟುಬಿಟ್ಟೆ. ನಾನು ಸರ ತೆಗೆದುಕೊಂಡಿಲ್ಲವೆಂದು ಯಾವಾಗ ಹೇಳಿದೆ? ಆಗ ಹೋದವನು ಈಗತಾನೇ ನನಗೆ ಕಾಣಿಸಿದೆ" ಎಂದ ಹಿರಿಯಮಾಧವ.

"ಅವರು ಮನೆಯಿಂದ ತಪ್ಪಿಸಿಕೊಂಡು ಬಂದಿದ್ದಾರೆ. ಕೈಕಾಲು ಕಟ್ಟಿ ಮನೆಗೆ ಸೇರಿಸಿ. ಆ ರಾಮನನ್ನೂ ಹಿಡಿದು ಕಟ್ಟಿ" ಎಂದು ಕೂಗುತ್ತ ಮಂಜರಿ ಅವರನ್ನು ಸಮೀಪಿಸಿದಳು.

ತಮಗೆ ಯಾವುದೋ ಹೊಸ ಆಪತ್ತು ಸಂಭವಿಸಬಹುದೆಂದು ಊಹಿಸಿ ಮಾಧವ ಮತ್ತು ರಾಮರು ಸಮೀಪದಲಿದ್ದ ಒಂದು ಆಶ್ರಮವನ್ನು ಪ್ರವೇಶಿಸಿದರು. ಆ ಆಶ್ರಮದಲ್ಲಿ ಯೋಗಿನಿಯೊಬ್ಬಳು ವಾಸಿಸುತ್ತಿದ್ದಳು. ಹೊರಗೆ ನಡೆಯುತ್ತಿದ್ದ ಗಲಭೆ ಕೇಳಿ ಆ ಯೋಗಿನಿ ಹೊರಗೆ ಬಂದಳು. ತನ್ನ ಗಂಡನಿಗೆ ಬುದ್ಧಿ ಭ್ರಮಣೆಯಾಗಿದೆಯೆಂದೂ, ಮನೆಯಿಂದ ತಪ್ಪಿಸಿಕೊಂಡು ಆಶ್ರಮವನ್ನು ಪ್ರವೇಶಿಸಿರುವರೆಂದೂ ಹೇಳಿದಳು ಮಂಜರಿ. ತನ್ನ ಗಂಡನನ್ನು ತನ್ನ ವಶಪಡಿಸಿ ಕೊಡಬೇಕೆಂದು ಅವಳು ಯೋಗಿನಿಯನ್ನು ಪ್ರಾರ್ಥಿಸಿದಳು.

"ನಿನ್ನ ಪತಿಮಾತ್ರ ಯಾರನ್ನಾದರೂ ಪ್ರೇಮಿಸುತ್ತಿರುವುದರಿಂದ ಮತಿ ಹೋಯಿತೇ?



ಇಲ್ಲ ಹಣ ಕಳೆದುಕೊಂಡು ಹುಚ್ಚನಾಗಿರುವನೇ?" ಎಂದು ಯೋಗಿನಿ ಕೇಳಿದಳು.

"ಯಾವಳೊಂದಿಗೋ ಸಂಬಂಧವಿಟ್ಟುಕೊಂಡಿರುವುದರಿಂದಲೇ ಮತಿ ಹೋಗಿರಬೇಕು. ನನಗೆ ಮೊದಲಿಂದಲೇ ಅನುಮಾನವಿತ್ತು" ಎಂದಳು ಮಂಜರಿ.

"ಬುದ್ಧಿವಂತಳಾದ ನೀನು ನಿನ್ನ ಗಂಡನನ್ನು ಮೊದಲೇ ಸರಿಪಡಿಸಬೇಕಾಗಿತ್ತು" ಎಂದು ಹಿತನುಡಿದಳು ಯೋಗಿನಿ.

"ಅಯ್ಯೋ ಎಷ್ಟೂಂತ ಹೆಣಗಾಡಲಿ ತಾಯಿ. ಸದಾ ಗದರಿಸುತ್ತಿದ್ದೆ. ಅವರು ಮನೆಯಲ್ಲಿದ್ದಷ್ಟು ಹೊತ್ತು ನನ್ನ ಬಾಯಿಗೆ ಬಿಡುವೇ ಇರುತ್ತಿರಲಿಲ್ಲ. ಊಟಕ್ಕೆ ಕುಳಿತಾಗಲೂ ಬುದ್ಧಿ ಹೇಳುತ್ತಿದ್ದೆ. ಎಲ್ಲಾ ಬೂದಿಯಲ್ಲಿ

ಸುರಿದ ಪನ್ನೀರಾಯಿತು " ಎಂದಳು ಮಂಜರಿ. ಮಂಜರಿಯ ಸ್ವಭಾವವನ್ನು ಅರ್ಥಮಾಡಿಕೊಂಡಳು ಯೋಗಿನಿ. ಆಕೆ ದೊಡ್ಡಮಾಧವನನ್ನು ಅವಳ ವಶಪಡಿಸಲು ನಿರಾಕರಿಸಿದಳು. ಈ ವಾಗ್ವಾದ ನಡೆಯುತ್ತಿರುವಾಗ ರಾಜಭಟರೊಂದಿಗೆ ಧನಪಾಲನು ಅಲ್ಲಿಗೆ ಬಂದನು. ಅವನಿಗೆ ನಗರದಲ್ಲಿ ಪರಿಚಯಸ್ಥರು ಯಾರೂ ಸಿಕ್ಕಲಿಲ್ಲ; ಹಣ ಕೊಡುವವರಿಲ್ಲವಾಯಿತು.

ಆತನು ಆಶ್ರಮದಬಳಿಗೆ ಬರುವವೇಳೆಗೆ, ಕತ್ತಲೆ ಕೋಣೆಯಿಂದ ತಪ್ಪಿಸಿಕೊಂಡ ಸಣ್ಣಮಾಧವ, ಮತ್ತು ಸಣ್ಣರಾಮರೂ ಅಲ್ಲಿಗೆ ಬಂದರು. ಸಣ್ಣಮಾಧವನನ್ನು ಕಂಡ ಕೂಡಲೇ ಧನಪಾಲನು ಪ್ರೀತಿಯಿಂದ ಮಾತನಾಡಿಸಿ " ನಿನ್ನ ತಮ್ಮನನ್ನು ಹುಡಿಕಿಕೊಂಡು ಇಲ್ಲಿಗೆ ಬಂದೆಯಾ ಮಗು. ಈ ರಾಜಭಟರು ನನ್ನನ್ನು ಬಂಧಿಸಿದ್ದಾರೆ. ಪರಿಹಾರವಾಗಿ ಸಾವಿರ ವರಹಗಳನ್ನು ಕೊಟ್ಟು ನನ್ನನ್ನು ಮೊದಲು ಬಿಡಿಸು " ಎಂದನು.

" ಅಯ್ಯಾ, ತಾವು ಯಾರೋ ನಾನರಿಯೆ." ಎಂದ ಸಣ್ಣಮಾಧವ. ಅವನೆಂದೂ ತನ್ನ ತಂಧೆಯನ್ನು ಕಂಡಿರಲಿಲ್ಲ. ಧನಪಾಲನು ತನ್ನ ಪರಿಚಯವನ್ನು ಹೇಳುತ್ತಿರಲು ಆಶ್ರಮದಿಂದ ದೊಡ್ಡಮಾಧವ ಮತ್ತು ರಾಮರು ಯೋಗಿನಿಯೊಂದಿಗೆ ಆ ಸ್ಥಳಕ್ಕೆ ಬಂದರು. ತನ್ನ ಪತಿಯಂತೆ ಕಂಡುಬಂದ ಇಬ್ಬರು ವ್ಯಕ್ತಿಗಳಿರುವುದನ್ನು ಕಂಡು ಮಂಜರಿ ದಿಗ್ಭ್ರಮೆಗೊಳಗಾದಳು.

ನಂತರ ಅವಳಿಗೆ ಎಲ್ಲ ವಿಷಯವೂ ಅರ್ಥವಾಯಿತು. ಯೋಗಿನಿ ಧನಪಾಲನ ಪತ್ನಿಯೆಂದು ತಿಳಿದು ಬಂತು. ಹಸುಳೆಯಾಗಿದ್ದಾಗ ಬೇರೆಬೇರೆಯಾಗಿದ್ದ ಅವಳಿಜವಳಿಮಕ್ಕಳು ಅನೇಕ ವರ್ಷಗಳ ನಂತರ ಒಟ್ಟುಗೂಡಿದರು. ದೊಡ್ಡಮಾಧವನಿಗೆ ರಾಜನ ಆಸ್ಥಾನದಲ್ಲಿ ನೌಕರಿ ಸಿಕ್ಕಿತು. ಅವನು ಮಾಲತಿಯನ್ನು ಮದುವೆಯಾದನು. ಅವರಿಬ್ಬರ ಅನ್ಯೋನ್ಯ ದಾಂಪತ್ಯವನ್ನು ಕಂಡು ಮಂಜರಿಸಹ ಪಾಠ ಕಲಿತಳು. ತನ್ನ ಗಂಡನಿಗೆ ತೊಂದರೆಕೊಡುವುದನ್ನು ಕ್ರಮೇಣ ನಿಲ್ಲಿಸಿದಳು. ಧನಪಾಲನು ತನ್ನ ಮಡದಿ, ಮಕ್ಕಳು ಮತ್ತು ಅವರ ನೌಕರರೊಂದಿಗೆ ರುದ್ರಪುರದಲ್ಲೇ ನೆಲಸಿ, ಸುಖವಾಗಿ ಬಾಳುತ್ತಿದ್ದನು.






ಹಿಂದೆ ಬಾಗದಾದಿನಲ್ಲಿ ಶ್ರೀಮಂತನಾದ ವೃದ್ಧನೊಬ್ಬನಿದ್ದನು. ಅವನಿಗೆ ಅರಮನೆಯಂತಹ ಭವ್ಯಭವನವಿತ್ತು. ಭವನದ ಮುಂದೆ ರಮ್ಯವಾದ ತೋಟ ಕಂಗೊಳಿಸುತಿತ್ತು. ಮನೆಯಲ್ಲಿದ್ದ ಆಸನಗಳಿಗೆಲ್ಲಾ ಮಕಮಲ್ ಹಾಸಲಾಗಿತ್ತು. ಅವನ ಬಳಿ ಅನೇಕ ನೌಕರರಿದ್ದರು. ಆದರೂ ಅವನು ಅತ್ಯಂತ ಕಠಿನಾತ್ಮನು. ಬಡಬಗ್ಗರನ್ನು ಅನಾಥರನ್ನು ವೃಥಾ ಹಿಂಸಿಸಿ, ಪೀಡಿಸುವನು. ಅದೇ ಅವನಿಗೊಂದು ಹವ್ಯಾಸವಾಗಿತ್ತು.

ಒಂದುದಿನ ಅವನು ವಸಾರೆಯಲ್ಲಿ ದಿಂಬಿಗೊರಗಿಕೊಂಡು ಕುಳಿತಿದ್ದಾಗ, ಊಟಕ್ಕೆ ಗತಿಯಿಲ್ಲದ ನಿರ್ಭಾಗ್ಯನೊಬ್ಬನು ಅಲ್ಲಿಗೆ ಬಂದ. ಅವನು ಶ್ರೀಮಂತನಿಗೆ ನೆಲಮುಟ್ಟಿ ನಮಸ್ಕಾರ ಮಾಡಿದನು. ಆ ನಿರ್ಭಾಗ್ಯನ ಹೆಸರು ಷಕ್ಕಾಷಿಕ್. ತಂದೆತಾಯಿಗಳನ್ನು ಕಳೆದುಕೊಂಡಾಗಲಿಂದ ಅವನು ತಿರುಪೆಬೇಡಿ ಜೀವಿಸುತ್ತಿದ್ದನು.

ಮುದುಕನು ಅವನನ್ನು ನೋಡಿ ಮೃದುಮಧುರವಾಗಿ " ನಿನಗೇನು ಬೇಕು ತಮ್ಮಾ " ಎಂದು ಕೇಳಿದನು. " ಸ್ವಲ್ಪ ಧರ್ಮಮಾಡಿ, ಸ್ವಾಮಿ. ಹಸಿವಿನಿಂದ ಕಂಗಾಲಾಗಿದ್ದೇನೆ " ಎಂದ ಷಕ್ಕಾಷಿಕ್.

ಮುದುಕನು ಉದ್ರೇಕಗೊಂಡು " ಅರೆ ಅಲ್ಲಾ, ಏನೆಂದೆ? ನಾನು ಈ ನಗರದಲ್ಲಿ ಜೀವಿಸಿರುವಾಗ ಪ್ರಜೆಗಳು ಹೊಟ್ಟೆಗಿಲ್ಲದೆ ಸಂಕಟಪಡುವುದುಂಟೇ? ನಾನಿದನ್ನು ಎಂದೂ ಸಹಿಸಲಾರೆ " ಎಂದನು.

" ಸಾವಿರ ವರ್ಷಕಾಲ ಬಾಳಿ ಸ್ವಾಮಿ. ಹಸಿವು ಸಹಿಸಲಸಾಧ್ಯವಾಗಿದೆ." ದೈನ್ಯದ ಮೂರ್ತಿಯಾಗಿದ್ದ ಷಿಕ್.

" ಸರಿ, ಸರಿ. ನೀನು ನನ್ನೊಂದಿಗೆ ಇಂದು ಊಟಕ್ಕೆ ಕುಳಿತುಕೊ " ಎಂದು ಹೇಳಿ ಮುದುಕನು ಒಬ್ಬ ಹುಡುಗನನ್ನು ಕರೆದು, ಕೈತೊಳೆದುಕೊಳ್ಳಲು ನೀರು ತಂದುಕೊಡುವಂತೆ ಆಜ್ಞೆಮಾಡಿದನು.

ತರುವಾಯ ಅವನೆದ್ದು ಒಂದು ಪಕ್ಕಕ್ಕೆ ಹೋಗಿ ಹೂಜಿಯಿಂದ ಕೈಮೇಲೆ ನೀರು ಸುರಿದುಕೊಂಡು ತೊಳೆದುಕೊಂಡಂತೆ ನಟಿಸಿ

ವಿ. ಮೋಹನದಾಸ

"ನೀನೂ ಕೈತೊಳೆದುಕೋ ಬಾಪ್ಪಾ" ಎಂದನು. ತನ್ನ ಕೈ ಒದ್ದೆ ಯಾದಂತೆಯೂ, ಅದನ್ನು ಒಂದು ಕೈವಸ್ತ್ರದಲ್ಲಿ ಒರಸಿಕೊಂಡಂತೆಯೂ ಅವನು ನಟಿಸಿದನು.

ಈ ನಟನೆಯ ರಹಸ್ಯವೇನೋ ಷಿಕ್‌ಗೆ ಅರ್ಥವಾಗಲಿಲ್ಲ. ಮುದುಕನ ಹಾಸ್ಯಧೋರಣೆ ಕಂಡು ಮಂದಹಾಸ ಬೀರಿ ಅವನೂಸಹ ಕೈತೊಳೆದುಕೊಂಡಂತೆ ಅಭಿನಯಿಸಿದನು.

"ಲೋ, ಊಟದ ಸ್ಥಳದಲ್ಲಿ ಬಟ್ಟೆ ಹರವಿ ಬೇಗ ಇಡು. ಪಾಪ, ಈ ನಿರ್ಭಾಗ್ಯನು ಬಹಳ ಹಸಿವಿನಿಂದ ಬಾಧೆಪಡುತ್ತಿದ್ದಾನೆ." ಎಂದು ಮುದುಕನು ತನ್ನ ನೌಕರರಿಗೆ ಹೇಳಿದನು.

ಕೂಡಲೇ ಅನೇಕಮಂದಿ ನೌಕರರು ಗಡಿಬಿಡಿಯಿಂದ ಬಂದರು. ಕೆಲವರು ನೆಲದ ಮೇಲೆ ಬಟ್ಟೆ ಹರುವುತ್ತಿರುವಂತೆ ನಟಿಸಿದರು. ಕೆಲವರು ತಟ್ಟೆಗಳನ್ನಿಡುವಂತೆಯೂ, ಮತ್ತೆ ಕೆಲವರು ತಿಂಡಿತಿನಸುಗಳನ್ನು ತರುತ್ತಿರುವಂತೆಯೂ ನಟಿಸಿದರು.

ಷಿಕ್‌ಗೆ ಹಸಿವೋಹಸಿವು. ಆದರೂ ಅವನು ಈ ನಾಟಕವನ್ನು ಸಹಿಸಿಕೊಳ್ಳಬೇಕಾಯಿತು. ಬಡವರು ಶ್ರೀಮಂತರ ವಿನೋದವಿಲಾಸಗಳನ್ನು ವಿಮರ್ಶಿಸುವುದು ಮೂರ್ಖತನವೆಂದು ಅವನು ಬಲ್ಲನು.

"ಕುಳಿತುಕೋ ತಮ್ಮಾ, ಊಟಮಾಡು" ಎಂದು ಮುದುಕನು ತನ್ನ ಮುಂದಿರುವ ಪದಾರ್ಥಗಳನ್ನು ಒಂದೊಂದಾಗಿ ರುಚಿನೋಡಿದಂತೆ ಅಭಿನಯಿಸಿ ಬಾಯಿ ಚಪ್ಪರಿಸುತ್ತಿದ್ದನು. "ಸಂಕೋಚಪಡಬೇಡ. ನಿನಗೆ ಬೇಕಾದು



ದನ್ನು ಬೇಕಾದಷ್ಟು ತಿನ್ನು. ಈ ರೊಟ್ಟಿ ನೋಡು, ಎಷ್ಟು ತೆಳ್ಳಗೆ ಮತ್ತು ಬೆಳ್ಳಗಿದೆ" ಎಂದನು ಮುದುಕ.

"ಇಷ್ಟೊಂದು ಬಿಳಿಯ ರೊಟ್ಟಿಯನ್ನು ನಾನು ಎಂದೂ ತಿಂದಿಲ್ಲ. ರುಚಿ ದಿವ್ಯವಾಗಿದೆ." ಎಂದು ಷಿಕ್ ತಾನೂ ಸಹ ರೊಟ್ಟಿಯ ಸವಿನೋಡಿದಂತೆ ಬಾಯಿ ಚಪ್ಪರಿಸಿ ಅಭಿನಯಿಸಿದನು.

ಮುದುಕನು ಆ ರೊಟ್ಟಿಯನ್ನು ತಯಾರು ಮಾಡಿದ ನಿಗ್ರೋಜಾತಿಯ ಅಡಿಗೆಯವಳನ್ನು ಕುರಿತು, ತಾನು ಅವಳಿಗೆ ಕೊಡುವ ಸಂಬಳವನ್ನು ಕುರಿತು ಹೇಳಲಾರಂಭಿಸಿದನು. ತಮ್ಮ ಮುಂದಿರುವ ಭಕ್ಷ್ಯಗಳನ್ನು ಮಾಂಸವನ್ನು ಬಣ್ಣಿಸಿದನು. ಅವುಗಳ ರುಚಿ ಮತ್ತು ಕಂಪನ್ನು ಮೆಚ್ಚಿಕೊಂಡನು. ಅವನು ಹೇಳುವ ವಿವಿಧ ಭಕ್ಷ್ಯಗಳ ಹೆಸರುಗಳನ್ನೂ ವರ್ಣನೆಗಳನ್ನೂ ಕೇಳುತ್ತಿದ್ದಂತೆ ಷಿಕ್‌ನ ಕ್ಷುದ್ಬಾಧೆ ಮತ್ತಷ್ಟು ತೀವ್ರವಾಗುತಿತ್ತು.

ಅಣಕದ ಊತಣ ಮುಗಿದ ನಂತರ ಮುದುಕನು ಮಿಠಾಯಿಗಳನ್ನು, ಹಲ್ವಾಗಳನ್ನು ತರುವಂತೆ ನೌಕರರಿಗೆ ಹೇಳಿದನು. ನೌಕರರೂ ಅವುಗಳನ್ನು ತಂದಿಟ್ಟಂತೆ ನಟಿಸಿದರು. ಮುದುಕನು ಯಥಾಪ್ರಕಾರ ಅವುಗಳನ್ನು ಬಣ್ಣಿಸಿ, ಹಾಡಿಹೊಗಳಿದನು. ಮಧ್ಯೆಮಧ್ಯೆ "ಹೇಗಿದೆ? ಇನೊಂದು ಹಾಕಿಸಿಕೊಳ್ಳಿ" ಎಂದು ಅತಿಥಿಯನ್ನು ಕೇಳುತ್ತಿದ್ದನು.

ಅನಂತರ ಫಲ ಪಾನೀಯಗಳನ್ನು ತರುವಂತೆ ಆಜ್ಞೆಯಿತ್ತನು ಆ ಶ್ರೀಮಂತ. ನೌಕ



ರರು ನೆಲವನ್ನು ಶುಭ್ರಗೊಳಿಸಿ ಷರಬತ್ತು ಮತ್ತು ಶ್ರೇಷ್ಠವಾದ ಮದ್ಯಗಳನ್ನು ತಂದಿಟ್ಟಂತೆ ಅಭಿನಯಿಸಿದರು.

"ಕುಡಿ ತಮ್ಮಾ, ಇಂತಹ ಷರಬತ್ತು ಮತ್ತೆಲ್ಲೂ ಸಿಗುವುದಿಲ್ಲ. ಈ ಮದ್ಯದ ರುಚಿ ನೋಡಿದೆಯಾ? ಹಳೇ ಮದ್ಯವಿದು. ಕುಡಿ, ಸಂಕೋಚಪಡದೆ ಕುಡಿ" ಎಂದು ಅತಿಥಿಗೆ ಪ್ರೋತ್ಸಾಹ ಕೊಟ್ಟನು. ತಾನೂ ಎತ್ತಿಕೊಂಡು ತುಟಿಯಬಳಿಗೆ ಮಧುಪಾತ್ರೆಯನ್ನು ತಂದಂತೆ ನಟಿಸಿದನು.

ಆದುವರೆಗೆ ಮುದುಕನ ನಾಟಕವನ್ನು ಸಹಿಸಿಕೊಂಡಿದ್ದ ಷಿಕ್‌ನ ತಾಳ್ಮೆ ಮೀರಿತು. ಅವನು ಪಕ್ಕನೆ ಹಾರಿಕೊಂಡೆದ್ದು ಮುದುಕನ ಕುತ್ತಿಗೆಯಮೇಲೆ ಮನೆಯೆಲ್ಲಾ ಪ್ರತಿಧ್ವನಿಸುವಂತೆ ಬಲವಾಗಿ ಹೊಡೆದನು.

ಮುದುಕನು ಚಕಿತನಾಗಿ, ಕೋಪದಿಂದ "ಲೋ, ಚಂಡಾಲಾ, ಏನು ಮಾಡಿಬಿಟ್ಟೆಯೋ" ಎಂದು ಕಿರಿಚಿಕೊಂಡನು.

"ಯಜಮಾನರೇ, ನಾನು ನಿಮ್ಮ ಗುಲಾಮ. ಆದರೆ ನೀವು ನನ್ನಿಂದ ಇಷ್ಟೊಂದು ಮದ್ಯ ಕುಡಿಸಬಾರದಾಗಿತ್ತು. ಅಭ್ಯಾಸವಿಲ್ಲದ ನನಗೆ ಮತ್ತೇರಿಬಿಟ್ಟಿತು. ನನ್ನ ಅಪಚಾರ ಕ್ಷಮಿಸಬೇಕು" ಎಂದನು.

ಅವನ ಮಾತು ಕೇಳಿ ಮುದುಕನು ಗಹಗಹಿಸಿ ನಕ್ಕು "ಲೋ, ಶನಿಯೇ, ನಾನೆಷ್ಟೋ ಜನರನ್ನು ಗೋಳಾಡಿಸಿದ್ದೇನೆ. ಯಾರೂ ನಿನ್ನಷ್ಟು ಸಹನೆ ತೋರಲಿಲ್ಲ. ನಿನಗಿರುವಷ್ಟು ಹಾಸ್ಯಮನೋಭಾವವನ್ನು ನಾನು ಯಾರಲ್ಲೂ ಕಂಡಿಲ್ಲ. ನೀನು ನನಗಿಂದು ಉತ್ತಮ ಪಾಠ ಕಲಿಸಿದೆ. ಬಾ, ಕುಳಿತುಕೊ. ನಿನಗೆ ನಿಜವಾದ ಔತಣ ಮಾಡಿಸುತ್ತೇನೆ" ಎಂದನು.

ಈಸಾರಿ ನಿಜವಾದ ಆಹಾರಪದಾರ್ಥಗಳನ್ನು ಮೇಜಿನಮೇಲಿಡಲಾಯಿತು. ಮುದುಕನು ಹಿಂದೆ ಬಣ್ಣಿಸಿದ್ದ ಭಕ್ಷ್ಯಗಳೆಲ್ಲ ಈಗ ಷಿಕ್‌ನ ಮುಂದೆ ಪ್ರತ್ಯಕ್ಷವಾದುವು.

ಷಿಕ್ ಅಂದಿನಿಂದ ತಿಂಡಿತೀರ್ಥಗಳಿಗೆ ತಾಪತ್ರಯಪಡಬೇಕಾದ ಪ್ರಮೇಯ ಒದಗಿಬರಲಿಲ್ಲ. ತಾನು ಜೀವಿಸಿರುವಷ್ಟುಕಾಲ ಆ ಮುದುಕನು ಷಿಕ್‌ನನ್ನು ತನ್ನೊಂದಿಗೆ ಊಟಕ್ಕೆ ಕೂಡಿಸಿಕೊಳ್ಳುತ್ತಿದ್ದನು.






# 17

[ತನ್ನನ್ನು ವಿವಾಹವಾಗುವಂತೆ ಪೀಡಿಸುತ್ತಿದ್ದ ಯುವಕರಲ್ಲಿ ಯಾರಾದರೂ ತನ್ನ ಗಂಡ ರೂಪಧರನ ಧನುಸ್ಸನ್ನು ಬಗ್ಗಿಸಿ ಹನ್ನೆರಡು ಕೊಡಲಿ ತೂಬುಗಳನ್ನು ತೂರಿಕೊಂಡು ಹೋಗುವಂತೆ ಬಾಣಬಿಟ್ಟಾತನನ್ನು ಮದುವೆಯಾಗಲು ಪದ್ಮಮುಖಿ ನಿರ್ಧರಿಸಿದಳು. ವೃದ್ಧ ಭಿಕ್ಷುಕನ ರೂಪದಲ್ಲಿ ಬಂದಿದ್ದ ತನ್ನ ಗಂಡನನ್ನು ಗುರುತು ಹಿಡಿಯದೆ, ಆಕೆ ಆತನೊಂದಿಗೆಕೂಡ ಇದನ್ನು ಹೇಳಿದಳು. ಮಾರನೇಯದಿನ ತನ್ನ ಮನೆ ಸೇರಿಕೊಂಡಿದ್ದ ಯುವಕರಮುಂದೆ ರೂಪಧರನ ಧನುಸ್ಸು ಮತ್ತು ಬಾಣಗಳನ್ನು ತಂದಿಡಿಸಿದಳು.]

ಸೆರದಿಯಪ್ರಕಾರ ಒಬ್ಬೊಬ್ಬರಾಗಿ ಬಂದು ಧನುಸ್ಸಿಗೆ ಹೆದೆಯೇರಿಸಲು ಪ್ರಯತ್ನಿಸಿ ವಿಫಲರಾಗುತ್ತಿದ್ದರು. ಇದನ್ನು ಕಂಡು ದುರ್ಬುದ್ಧಿ ಕಾಳನನ್ನು ಕರೆದು "ಲೋ, ಈ ಬಿಲ್ಲಿಗೆ ಕೊಬ್ಬು ಸವರಿ ಬೆಂಕಿಯಬಳಿಯಿಟ್ಟು ಶಾಖ ಕೊಡು" ಎಂದು ಹೇಳಿದನು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ. ಹೀಗೆ ಆ ಉಂಡಾಡಿಗಳು ಧನುಸ್ಸಿನೊಂದಿಗೆ ಹೆಣಗಾಡುತ್ತಿರುವ ಸಮಯದಲ್ಲಿ ಹಂದಿಚೇಕ ಮತ್ತು ದನಕಾಯುವವನು ಹೊರಗೆ ಹೋದರು. ಇದನ್ನು ಗಮನಿಸಿದ ರೂಪಧರನು ತಾನೂ ಹೊರಗೆ ನಡೆದನು. ಆತನು ಅವರನ್ನು ಕುರಿತು ರಹಸ್ಯವಾಗಿ ಇಂತೆಂದನು. "ನಾನು ಹೇಳುವುದನ್ನು ಕಿವಿಗೊಟ್ಟು ಲಾಲಿಸಿ. ನಿಮ್ಮ ಯಜಮಾನ ರೂಪಧರನು ಹಿಂತಿರುಗಿ ಬಂದರೆ ನೀವು ಆತನಿಗೆ ಸಹಾಯ ಮಾಡು

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ವಿರಾ? ಒಳಗೆ ಸೇರಿರುವ ದುಷ್ಟರೊಂದಿಗೆ ಆತನ ಪರವಾಗಿ ಹೋರಾಡಲು ಸಿದ್ಧವಾಗಿರುವಿರಾ? ಮುಚ್ಚುಮರೆಯಿಲ್ಲದೆ ನಿಜ ಹೇಳಿ" ಜೀವದ ಹಂಗು ತೊರೆದು ಹೋರಾಡಲು ಸಿದ್ಧರಾಗಿದ್ದೇವೆಂದು ಅವರು ಪ್ರಮಾಣಮಾಡಿ ಹೇಳಿದರು. ಆಗ ರೂಪಧರನು,

"ನಾನೇ ರೂಪಧರನು. ನಾನು ಸ್ವದೇಶಕ್ಕೆ ಹಿಂತಿರುಗಿ ಬರುವುದು ನಿಮ್ಮಿಬ್ಬರಿಗೆಮಾತ್ರ ಸಂತೋಷವಾಗಿರುವಂತೆ ತೋರುತ್ತದೆ. ದೇವರ ದಯದಿಂದ ನಾನು ನನ್ನ ವೈರಿಗಳನ್ನು ನಾಶಮಾಡಿದ್ದೇ ಆದರೆ ನಿಮಗೆ ನಾನು ಭಾರಿಭಾರಿ ಬಹುಮಾನಗಳನ್ನು ಕೊಡುತ್ತೇನೆ. ಹೊಲಗಳನ್ನು ಕೊಡಿಸುತ್ತೇನೆ; ಮನೆಗಳನ್ನು ಕೊಡುತ್ತೇನೆ. ನಾನು ರೂಪಧರನೋ ಅಲ್ಲವೋ ಎಂಬ ಸಂಶಯ ನಿಮಗೆ ಬೇಡ. ಇದೋ ಈ ಮಚ್ಚೆ ನೋಡಿ" ಎಂದು ತನ್ನ ತೊಡೆಯ ಮೇಲಿನ ಮಚ್ಚೆಯನ್ನು ಅವರಿಗೆ ತೋರಿಸಿದನು.

ಆ ನಂಬಿಕೆಯ ಭಟರು ತಮ್ಮ ಯಜಮಾನನನ್ನು ಕಂಡು ಆನಂದ ಬಾಷ್ಪಗಳನ್ನು ಸುರಿಸಿದರು. "ಈಗ ಸಂಭ್ರಮಕ್ಕಾಗಲೀ, ಕಣ್ಣೀರು ಸುರಿಸುವುದಕ್ಕಾಗಲೀ ಸಮಯವಿಲ್ಲ. ನಾನು ಈಗ ಒಳಗೆ ಹೋಗುವೆನು. ತರುವಾಯ ನೀವು ಒಬ್ಬೊಬ್ಬರಾಗಿ ಬನ್ನಿ. ನಾನು ಬಿಲ್ಲನ್ನು ಕೊಡುವಂತೆ ಹೇಳುತ್ತೇನೆ. ಅವರು ಕೊಡಲು ನಿರಾಕರಿಸುತ್ತಾರೆ. ಆಗ ಹಂದಿಜೇಕನು ಧನುಸ್ಸನ್ನು ತಂದು ನನಗೆ ಕೊಡಲಿ. ತದನಂತರ ಸ್ತ್ರೀಯರಿರುವ ಸ್ಥಳಕ್ಕೆ ಹೋಗಿ ಎಲ್ಲರೂ ಅವರವರ ಕೋಣೆಗಳಲ್ಲಿದ್ದು ಬಾಗಿಲು ಹಾಕಿಕೊಳ್ಳುವಂತೆ ಹೇಳಬೇಕು. ಎಷ್ಟೇ ಗಡಿಬಿಡಿ, ಗೊಂದಲಗಳಾದರೂ ಹೊರಗೆ ಬರಕೂಡದೆಂದು ಅವರಿಗೆ ಎಚ್ಚರಿಕೆ ಕೊಡಬೇಕು. ಸುಖಪ್ರಾಪ್ತಿ, ನೀನು ಹೊರಗೆ ಹೋಗಿ ತಲೆ ಬಾಗಿಲನ್ನು ಮುಚ್ಚಿ ಅಗಳಿ ಹಾಕಿಬಿಡು. ತಿಳಿಯಿತೆ?" ಎಂದ ರೂಪಧರ.

ತರುವಾಯ ಆ ಮೂವರೂ ಒಬ್ಬರಾದ ನಂತರ ಒಬ್ಬರು ಒಳಗೆ ಪ್ರವೇಶಿಸಿ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತರು. ಆ ಸಮಯದಲ್ಲಿ ವಿಫಲಯೋಧನು ಧನುಸ್ಸಿನಮೇಲೆ ತನ್ನ ಶಕ್ತಿಯನ್ನು ತೋರಿಸಲು ಸಿದ್ಧವಾಗುತ್ತಿದ್ದನು. ಧನುಸ್ಸನ್ನು ಬಗ್ಗಿಸಲು ಅವನಿಂದ ಸಾಧ್ಯವಾಗಲಿಲ್ಲ. ಅವನು ನಿರಾಶೆಯಿಂದ ತಲೆ ತಗ್ಗಿಸಿ






" ನಾವೆಂತಹ ದೌರ್ಭಾಗ್ಯರು! ಮದುವೆಯ ಮಾತು ಒತ್ತೊಟ್ಟಿಗಿರಲಿ. ಮದುವೆಯಾಗಲು ಇಥಾಕಾದೇಶದಲ್ಲಿ ಎಷ್ಟು ಜನ ಸುಂದರಿಯರಿಲ್ಲ! ರೂಪಧರನೊಂದಿಗೆ ಹೋಲಿಸಿದರೆ ನಾವೆಲ್ಲ ಶಕ್ತಿಹೀನರೆಂದು ತೋರುವುದು. ನಾವೆಲ್ಲ ತಲೆ ತಗ್ಗಿಸ ಬೇಕಾದ ವಿಷಯವಿದು. ಬಲಹೀನರಾದ ನಮ್ಮ ತಲೆಮಾರಿನವರನ್ನು ಕಂಡು ಮುಂದಿನ ಪೀಳಿಗೆಯವರು ಏನು ಹೇಳುತ್ತಾರೆ?" ಎಂದನು.

ದುರ್ಬುದ್ಧಿ ಅವನ ಮಾತಿಗೆ ಇಂತೆಂದನು. " ನೀನು ಅಷ್ಟು ವಿಚಾರಪಡ ಬೇಕಾದ ಅಗತ್ಯವಿಲ್ಲ. ಇಂದು ಪರ್ವದಿನ. ನಾವು ಧನುಸ್ಸಿನ ಗೋಜಿಗೆ ಹೋಗಲೇ ಬಾರದಿತ್ತು. ಅದನ್ನು ಒಂದು ಕಡೆಗಿಡಿ. ಮತ್ತೆಂದಾದರೂ ಅದರ ಕಡೆ ಗಮನಕೊಡೋಣ."

ಅವನ ಮಾತು ಎಲ್ಲರಿಗೂ ಒಪ್ಪಿತು. ಎಲ್ಲರೂ ಊಟ ಮುಗಿದನಂತರ ರೂಪಧರನು " ಆರ್ಯ ಮಹಾಶಯರೇ, ಧನುಸ್ಸನ್ನು ನನ್ನ ಕೈಗೆ ಕೊಡಿ. ಹೇಗಿದ್ದರೂ ಇಂದು ನೀವು ಅದನ್ನು ಮುಟ್ಟುವುದಿಲ್ಲ. ನನ್ನ ಶಕ್ತಿಯನ್ನು ಪರೀಕ್ಷೆಮಾಡಿಕೊಳ್ಳುತ್ತೇನೆ. ನನ್ನ ಶಕ್ತಿ ಎಂದೋ ಕುಗ್ಗಿಹೋಯಿತು, ಬಿಡಿ " ಎಂದ. ರೂಪಧರನ ಮಾತು ಕೇಳಿ ಅಲ್ಲಿದ್ದವರಿಗೆಲ್ಲ ಆಗ್ರಹ ಬಂತು. ಆ ಮುದುಕನು ಬಿಲ್ಲನ್ನು ಬಗ್ಗಿಸುವನೇನೋ ಎಂದು ಭಯವಾಯಿತು. ದುರ್ಬುದ್ಧಿ ಉದ್ರಿಕ್ತನಾಗಿ " ನೀಚ, ಮತಿ ಹೋಯಿತೊ? ಮದುವೆಯಹುಚ್ಚು ಕಣ್ಣು ಕಾಣಿಸದಂತೆ ಮಾಡಿತೊ? ದ್ರಾಕ್ಷಾರಸ ತಲೆಗೇರಿತೊ? ನಿಜವಾಗಿ ನೀನಾ ಧನುಸ್ಸನ್ನು ಬಗ್ಗಿಸಿದರೆ ನಿನ್ನ ಪ್ರಾಣಗಳು ಉಳಿಯುವುದೆಂದು ಭಾವಿಸಿದೆಯಾ?" ಎಂದನು.

" ದುರ್ಬುದ್ಧಿ, ನನ್ನ ಮಗನು ಕರೆತಂದ ಅತಿಥಿಗೆ ಧನುಸ್ಸನ್ನು ಕೊಡಲೇಕೆ ನಿರಾಕರಿಸುವೆ? ಆತನು ಬಿಲ್ಲನ್ನು ಬಗ್ಗಿಸಿ ನನ್ನನ್ನು ವಿವಾಹವಾಗುವನೆಂದು ಹೆದರುವೆಯಾ? ಅಂತಹ ಉದ್ದೇಶವಿರುವುದೆಂದು ನೀನೇಕೆ ಭಾವಿಸಬೇಕು?" ಎಂದಳು ಪದ್ಮಮುಖಿ.

" ನಮಗೆ ಅಂತಹ ಭಯವೇನಿಲ್ಲ, ದೇವಿ, ಒಂದುವೇಳೆ ಈ ಅನಾಮಧೇಯನಾದ ವೃದ್ಧನು ಧನುಸ್ಸನ್ನು ಬಗ್ಗಿಸಿ, ಕೊಡಲಿ ತೂಬುಗಳಲ್ಲಿ ಬಾಣಬಿಟ್ಟರೆ ನಮಗೆಷ್ಟು ಅವಮಾನ! ನೀವೇ



ಯೋಚಿಸಿ" ಎಂದ ವಿಪುಲಯೋಧ. ಆಗ ಧೀರಮತಿ "ಅಮ್ಮಾ, ನಿನಗೇಕೆ ಈ ಗೊಡವೆ? ಧನುಸ್ಸನ್ನು ನನ್ನಿಷ್ಟ ಬಂದಾತನಿಗೆ ದಾನ ಮಾಡಿದರೂ ಅಡ್ಡಿಬರುವ ಎದೆಗಾರಿಕೆ ಯಾರಿಗೂ ಇಲ್ಲ" ಎಂದ.

ಅವನ ದಿಟ್ಟತನವನ್ನು ಕಂಡು ಪದ್ಮ ಮುಖಿಗೆ ಆಶ್ಚರ್ಯವಷ್ಟೇ ಅಲ್ಲ, ಹರ್ಷವೂ ಆಯಿತು. ಆಕೆ ಮರುಮಾತನಾಡದೆ ತನ್ನ ಕೋಣೆಗೆ ಹೊರಟುಹೋದಳು.

ಇತ್ತ ಹಂದಿಚೇಕನು ಧನುಸ್ಸನ್ನು ತೆಗೆದು ಕೊಂಡು ರೂಪಧರನಬಳಿಗೆ ಹೊರಟನು. ಅದನ್ನು ಕಂಡು ಎಲ್ಲರೂ ಗೊಂದಲವೆಬ್ಬಿಸಿ ದರು. ಅವರ ಅರಚಾಟ ಬೆದರಿಕೆಗಳಿಗೆ ಹೆದರಿ ಹಂದಿಚೇಕನು ಧನುಸ್ಸನ್ನು ಕೆಳಗೆಬೀಳಿಸಿದನು. ಆದರೆ ಧೀರಮತಿ "ಅವರ ಕೂಗಾಟದಿಂದ ನಿನಗೇನಾಗಬೇಕು. ನಿನ್ನ ಕೆಲಸ ನೀನು ಮಾಡು" ಎಂದು ಧೈರ್ಯ ಹೇಳಿದನು.

ಹಂದಿಚೇಕನು ಧನುಸ್ಸನ್ನು ರೂಪಧರನಿಗಿತ್ತು, ಸ್ತ್ರೀಯರಿದ್ದ ಸ್ಥಳಕ್ಕೆ ಹೋಗಿ ಬಹು ಕೀರ್ತಿಯೊಂದಿಗೆ "ಚಿಕ್ಕಯಜಮಾನರು ಹೀಗೆಂದು ಆಜ್ಞೆಮಾಡಿದ್ದಾರೆ—ಹೆಂಗಸರೆಲ್ಲರೂ ತಮ್ಮ ತಮ್ಮ ಕೋಣೆಗಳಿಗೆ ಹೋಗಿ ಅಗಳಿ ಹಾಕಿಕೊಳ್ಳಬೇಕಂತೆ. ಹೊರಗೆಷ್ಟು ಗಡಿಬಿಡಿಯಾದರೂ ಯಾರೂ ಹೊರಗೆ ಬರಲಾಗದು" ಎಂದು ಹೇಳಿದನು. ಈ ರಹಸ್ಯ ಆಜ್ಞೆಯ ಅರ್ಥವೇನೋ ಅವಳಿಗೆ ತಿಳಿಯಲಿಲ್ಲ. ಆದರೂ ಹಂದಿಚೇಕನು ಹೇಳಿದಪ್ರಕಾರ ಸಕಲ ಸಿದ್ಧತೆಗಳನ್ನು ಅವಳು ಮಾಡಿದಳು. ಸುಖ



ಪ್ರಾಪ್ತಿ ಮೆಲ್ಲನೆ ಅಲ್ಲಿಂದ ಜಾರಿಕೊಂಡು ತಲೆಬಾಗಿಲನ್ನು ಬಂಧಿಸಿ ಹಿಂತಿರುಗಿದನು. ಇಷ್ಟರಲ್ಲಿ ಹಂಡಿಚೇಕನು ತಂದಿತ್ತ ಧನುಸ್ಸನ್ನು ರೂಪಧರನು ಅತ್ತಿತ್ತ ತಿರುಗಿಸಿ ಪರೀಕ್ಷಿಸುತ್ತಿದ್ದನು. ಎಲ್ಲರ ದೃಷ್ಟಿ ಅವನತ್ತ ಕೇಂದ್ರೀಕರಿಸಿತ್ತು. "ಧನುಸ್ಸಿನ ವಿಷಯ ತಿಳಿದವನಂತೆ ತೋರುವುದು. ಅಂತಹದೊಂದು ಬಿಲ್ಲನ್ನು ತಯಾರಿಸಲು ಯೋಚಿಸುತ್ತಿರಬೇಕು. ಊಂ, ಬಿಲ್ಲನ್ನು ಹೆದೆಗೇರಿಸಿ ಏನು ಬಾಚಿಕೊಳ್ಳುತ್ತಾನೋ ನೋಡೋಣ" ಎಂದು ಅವರೆಲ್ಲ ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು.

ರೂಪಧರನು ಧನುಸ್ಸಿನ ಪರೀಕ್ಷೆ ಮುಗಿಸಿ, ಲೀಲಾಜಾಲವಾಗಿ ಬಿಲ್ಲಿಗೆ ಹಗ್ಗ ಬಿಗಿಸಿ, ಧನುಸ್ಸನ್ನು ಬಲಗೈಯಲ್ಲಿ ಹಿಡಿದು, ಎಡಗೈಯಿಂದ ಝುಂಕಾರಮಾಡಿದನು. ಆದರಿಂದ ಹೊರಟ ನಾದ ಕೇಳಿ ಎಲ್ಲರೂ ದಿಗ್ಭ್ರಮೆಗೊಂಡರು. ರೂಪಧರನು ಒಂದು ಉತ್ತಮ ಬಾಣವನ್ನು ಬತ್ತಳಿಕೆಯಿಂದ ಆರಿಸಿ ಗುರಿನೋಡಿ ಕೊಡಲಿ ತೂಬುಗಳ ಮಧ್ಯೆ ತೂರಿಕೊಂಡು ಹೋಗುವಂತೆ ಹೊಡೆದನು.

ತರುವಾಯ ಆತನು ತನ್ನ ಮಗನನ್ನು ಉದ್ದೇಶಿಸಿ "ಮಗೂ, ಧೀರಮತಿ. ನಾನು ನಿನಗೆ ಅಪ್ರತಿಷ್ಠೆ ತರುವುದಿಲ್ಲ. ಲೀಲಾಜಾಲವಾಗಿ ಬಿಲ್ಲಿಗೆ ಹೆದೆಯೇರಿಸಿ ಗುರಿಯಿಟ್ಟು ಬಾಣಬಿಟ್ಟೆ. ಈ ಮಹಾನುಭಾವರೆಲ್ಲ ಏನಾದರು ಹೇಳಲಿ, ನನ್ನ ಶಕ್ತಿಮಾತ್ರ ಕುಂದಿಲ್ಲವೆಂದು ಖಚಿತವಾಯಿತು. ಕತ್ತಲಾಗುತ್ತಿದೆ. ಇಲ್ಲಿ ನೆರೆದಿರುವ ಮಹನೀಯರ ರಾತ್ರಿ





ಊಟಕ್ಕೆ ಸಿದ್ಧತೆಗಳಾಗಲಿ. ಭೋಜನದ ನಂತರ ಕ್ರೀಡಾವಿನೋದಗಳು, ನೃತ್ಯಗಾನ ಗಳ ಕಾರ್ಯಕ್ರಮವಿದ್ದೇ ಇದೆ" ಎಂದು ಕಣ್ಣು ಸನ್ನೆಮಾಡಿದನು.

ಕೂಡಲೇ ಧೀರಮತಿ ಒಂದು ಕೈಯಲ್ಲಿ ಖಡ್ಗ, ಮತ್ತೊಂದು ಕೈಯಲ್ಲಿ ಹರಿತವಾದ ಈಟಿಯನ್ನು ಹಿಡಿದು ತನ್ನ ತಂದೆಯ ಪಕ್ಕ ದಲ್ಲಿ ಬಂದುನಿಂತನು. ರೂಪಧರನು ತನ್ನ ಹರಿದ ಅರಿವೆಗಳನ್ನು ಕಿತ್ತೆಸೆದು ಒಂದು ನೆಗೆತನೆಗೆದು ಹೊಸಲಿನಮೇಲೆ ನಿಂತು ಉಳಿದ ಬಾಣಗಳನ್ನು ತನ್ನ ಪಾದಗಳಬಳಿ ಜೋಡಿಸಿ "ಆಸಲಾಟ ಆರಂಭವಾಯಿತು. ನಾನು ಗುರಿ ನೋಡಿ ಮತ್ತೊಂದು ಬಾಣ ಬಿಡುತ್ತೇನೆ. ಇದುವರೆಗೆ ಯಾರೂ ಹಾಗೆ ಹೊಡೆದಿರಲಿಲ್ಲ" ಎಂದು ಗುರಿಯಿಟ್ಟು ದುರ್ಬುದ್ಧಿಯಕಡೆ ಬಾಣ ಪ್ರಯೋಗಮಾಡಿದನು.

ಆ ಬಾಣ ತನಗೆ ತಾಕುವುದೆಂದು ದುರ್ಬುದ್ಧಿ ಕನಸಿನಲ್ಲೂ ನೆನೆಸಿರಲಿಲ್ಲ. ಅಷ್ಟೇಕೆ ಯಾರೂ ಭಾವಿಸಿರಲಿಲ್ಲ. ದುರ್ಬುದ್ಧಿ ಎರಡು ಕೈಗಳಿಂದಲೂ ದೊಡ್ಡದೊಂದು ಹೆಂಡದ ಹೂಜೆಯನ್ನೆತ್ತಿ ಕುಡಿಯುತ್ತಿರಲು ಬಾಣ ಬಂದು ನೆಟ್ಟಗೆ ಅವನ ಕಂಠಕ್ಕೆ ನಾಟಿ ಕೊಂಡಿತು. ಹೂಜೆ ಅವನ ಕೈಯಿಂದ ಜಾರಿ ಬಿದ್ದು ಚೂರುಚೂರಾಯಿತು. ಅವನು ಒಂದು ಪಕ್ಕಕ್ಕೆ ಉರುಳಿಬಿದ್ದನು.

ಮರುಕ್ಷಣವೇ ಹಾಹಾಕಾರಗಳೆದ್ದುವು. ಎಲ್ಲರೂ ತಮ್ಮ ತಮ್ಮ ಪೀಠಗಳಿಂದ ಎದ್ದು ನಿಂತು ಆಯುಧಗಳಿಗಾಗಿ ಗೋಡೆಗಳತ್ತ ನೋಡಿದರು. ಗೋಡೆಗಳೆಲ್ಲ ಬರಿದಾಗಿದ್ದುವು.

"ಎಲವೋ ಚಂಡಾಲ, ಪ್ರಾಣಾಪಹಾರ ಮಾಡುವೆಯಾ, ಇರು, ನಿನ್ನನ್ನು ಯಮಸದ ನಕ್ಕೆ ಕಳುಹಿಸುತ್ತೇವೆ" ಎಂದು ಅರಚಿದರು. ಆಗಲೂ ಅವರು ನಿಜಾಂಶವನ್ನು ಗ್ರಹಿಸಲಿಲ್ಲ. ಪ್ರಮಾದವಶಾತ್ ಆ ಭಿಕ್ಷುಕನ ಬಾಣ ದುರ್ಬುದ್ಧಿಯ ಪ್ರಾಣವನ್ನು ಬಲಿತೆಗೆದು ಕೊಂಡಿತೆಂದು ಅವರು ಭಾವಿಸಿದ್ದರು.

ರೂಪಧರನು ಹುಬ್ಬುಗಂಟು ಹಾಕಿ ಅವರೊಂದಿಗೆ ಹೀಗೆಂದನು. "ಎಲವೊ ಕುನ್ನಿಗಳೇ, ನಾನು ಟ್ರಾಯ್‌ನಗರದಿಂದ ಹಿಂತಿರುಗುವುದಿಲ್ಲವೆಂದು ನೀವು ಆಶಿಸಿದ್ದಿ ರಲ್ಲವೇ? ಅಂತಲೇ ಧೈರ್ಯದಿಂದ ನನ್ನ

ಮನೆಗೆ ನುಗ್ಗಿ ನನ್ನ ಆಸ್ತಿಯನ್ನೆಲ್ಲಾ ಹಾಳು ಮಾಡಿದಿರಿ; ನಾನು ಜೀವದಿಂದಿರುವಾಗಲೇ ನನ್ನ ಮಡದಿಯನ್ನು ಮದುವೆಯಾಗಲು ಬಯಸಿದಿರಿ. ನಿಮಗೆ ನನ್ನ ಭಯವಿಲ್ಲ; ದೈವ ಭೀತಿಯಂತೂ ಇಲ್ಲವೇ ಇಲ್ಲ. ಅಂತಲೇ ಯಮ ಪಾಶ ನಿಮ್ಮ ಕೊರಳಿಗೆ ಸುತ್ತಿಕೊಂಡಿದೆ."

ಒಂದೆಡೆ ಆಶ್ಚರ್ಯ, ಒಂದೆಡೆ ಭಯದಿಂದ ಯಾರೂ ಮಾತನಾಡಲಿಲ್ಲ. ತುಸ ಹೊತ್ತಾದ ನಂತರ ವಿಪುಲಯೋಧನು ಧೈರ್ಯ ವಹಿಸಿ "ನೀನು ನಿಜವಾಗಿ ರೂಪಧರನೇ ಆಗಿದ್ದರೆ ನಿನ್ನ ಮಾತಿನಲ್ಲಿ ಸತ್ಯವಿದೆ. ನಮ್ಮಿಂದ ಅನೇಕ ಅಕ್ರಮಗಳು ನಡೆಯಿತು. ಒಪ್ಪಿಕೊಂಡೆವು. ಇದಕ್ಕೆ ಮೂಲಕಾರಣ ದುರ್ಬುದ್ಧಿ. ಅವನು ಕೇವಲ ನಿನ್ನ ಹೆಂಡತಿಯನ್ನು ವಿವಾಹ ವಾಗುವ ಉದ್ದೇಶದಿಂದ ಇಲ್ಲಿಗೆ ಬರಲಿಲ್ಲ. ನಿನ್ನ ಮಗನನ್ನು ಕೊಂದು ಆಸ್ತಿಯನ್ನೆಲ್ಲಾ ಅಪಹರಿಸುವ ಯೋಚನೆಯಿತ್ತು. ಈಗ ಲಾದರೂ ಮಿಂಚಿಹೋದುದೇನಿಲ್ಲ. ನಿನಗೆ ನಷ್ಟಪರಿಹಾರ ಕೊಡುತ್ತೇವೆ. ನಾವು ಕುಡಿದ ಮದ್ಯವನ್ನೆಲ್ಲಾ ಹಿಂತಿರುಗಿ ಕೊಡುತ್ತೇವೆ. ತಲಾ ಇಪ್ಪತ್ತು ಎತ್ತುಗಳಂತೆ ನಿನಗೆ ತಂದು ಕೊಡುತ್ತೇವೆ." ಎಂದ.

"ದುಷ್ಟರೇ, ನೀವು ಮಾಡಿದ ದುರಾಚಾರ ಗಳಿಗೆ ಒಂದೇ ಒಂದು ಪರಿಹಾರ—ನಿಮ್ಮ ಪ್ರಾಣಗಳು. ನಿಮ್ಮಲ್ಲಿ ಪ್ರತಿಯೊಬ್ಬನ ಪ್ರಾಣ ವನ್ನೂ ಬಲಿತೆಗೆದುಕೊಳ್ಳುತ್ತೇನೆ." ಎಂದು ರೂಪಧರನು ಅಬ್ಬರಿಸಿದನು.




ರೂಪಧರನ ರೌದ್ರಾವೇಶವನ್ನು ಕಂಡು ವಿಪುಲಯೋಧನು "ಸಹೋದರರೇ, ಈತನು ಚಂಡಿಹಿಡಿದಿದ್ದಾನೆ. ಕತ್ತಿಹಿರಿದು ಎಲ್ಲರೂ ಒಮ್ಮೆಗೇ ಆತನಮೇಲೆ ಬೀಳೋಣ. ಎಷ್ಟು ಜನರನ್ನು ಸಾಯಿಸಿಯಾನು? ನಾವು ಬೀದಿಗೆ ಹೋಗಿ ಒಂದುಸಾರಿ ಕೂಗಿದರೆ ನಮ್ಮ ಸಹಾ ಯಕ್ಕೆ ಅನೇಕರು ಬರುತ್ತಾರೆ. ಆಗ ಇವನ ಆಟ ಮುಗಿಯುತ್ತದೆ" ಎಂದ. ಹೀಗೆ ಹೇಳಿ ಅವನು ಖಡ್ಗಹಿಡಿದು ಅಬ್ಬರಿಸುತ್ತಾ ರೂಪ ಧರನಮೇಲೆ ಹಾರಿದನು. ಮರುಕ್ಷಣವೇ ರೂಪ ಧರನ ಬಾಣ ಅವನ ಎದೆಯನ್ನು ಸೀಳಿತು.

ಉಳಿದವರೂ ಸಹ ರೂಪಧರನಮೇಲೆ ಬಿದ್ದರು. ಕೆಲವರನ್ನು ಧೀರಮತಿ ತನ್ನ ಈಟಿ ಯಿಂದ ತಿವಿದು ಕೊಂದನು. ಅವನು ತನ್ನ

ತಂದೆಯೊಂದಿಗೆ "ಅಪ್ಪಾ, ನಿನಗೂ, ಹಂದಿ ಚೇಕ ಮತ್ತು ಸುಖಪ್ರಾಪ್ತಿಗೂ ಆಯುಧ ಗಳನ್ನು ತಂದುಕೊಡುತ್ತೇನೆ" ಎಂದನು.

"ಈ ಬಾಣಗಳು ಮುಗಿದುಹೋಗುವ ಮುಂಚೆ ತೆಗೆದುಕೊಂಡು ಬಾ" ಎಂದ ರೂಪಧರ. ಧೀರಮತಿ ಉಗ್ರಾಣದಕಡೆ ಹೋಗಿ ನಾಲ್ಕು ಡಾಲು, ಎಂಟು ಈಟಿ ಮತ್ತು ನಾಲ್ಕು ಶಿರಸ್ತ್ರಾಣಗಳನ್ನು ತೆಗೆದು ಕೊಂಡು ಕ್ಷಣಮಾತ್ರದಲ್ಲಿ ಅಲ್ಲಿಗೆ ಬಂದನು. ಅವುಗಳನ್ನು ಧರಿಸಿ ಅವರು ಬಾಗಿಲಿಗೆ ಅಡ್ಡ ವಾಗಿ ನಿಂತರು.

ಬಾಣಗಳು ಮುಗಿದನಂತರ ರೂಪಧರನು ಬಿಲ್ಲನ್ನು ಒಂದುಕಡೆಗಿಟ್ಟು, ಈಟಿಗಳನ್ನು ತೆಗೆದುಕೊಂಡನು. ಆವೇಳೆಗಾಗಲೇ ಕೆಲವರು ದುರ್ಮಾರ್ಗರು ಸತ್ತುಹೋಗಿದ್ದರೂ ಇನ್ನೂ ಹಲವರಿದ್ದರು. ಆಗ ಕಾಳನು ತನ್ನ ಯಜ ಮಾನರಿಗೆ ಸಹಾಯಮಾಡಿದನು. ಅವನು ಹಿಂಬಾಗಿಲಿನಿಂದ ಹೋಗಿ ಉಗ್ರಾಣದಿಂದ ಈಟಿಗಳನ್ನೂ, ಡಾಲುಗಳನ್ನೂ, ಶಿರಸ್ತ್ರಾಣ ಗಳನ್ನೂ ತಂದು ಹಂಚಿದನು. ಇದನ್ನು ಗಮನಿಸಿದ ರೂಪಧರನು "ಧೀರಮತಿ, ಅವ ರಿಗೆ ಮನೆಯಲ್ಲಿರುವ ದ್ರೋಹಿಗಳು ಯಾರೋ ಸಹಾಯ ಮಾಡುತ್ತಿರುವಂತಿದೆ" ಎಂದನು.

"ಅಪ್ಪಾ, ತಪ್ಪು ನನ್ನದು. ಉಗ್ರಾಣದ ಬಾಗಿಲಿಗೆ ಬೀಗಹಾಕುವುದನ್ನು ಮರೆತು ಬಿಟ್ಟೆ" ಎಂದು ಹೇಳಿ ದೀರಮತಿ ಹಂದಿಚೇಕ ನನ್ನು ಕರೆದು "ಕೂಡಲೇ ನೀನು ಹೋಗಿ ಉಗ್ರಾಣದ ಬಾಗಿಲಿಗೆ ಬೀಗಹಾಕಿ ಬಾ" ಎಂದನು. ಮತ್ತೊಮ್ಮೆ ಉಗ್ರಾಣವನ್ನು ಪ್ರವೇಶಿಸುತ್ತಿದ್ದ ಕಾಳನು ಹಂದಿಚೇಕನ ಕೈಗೆ ಸಿಕ್ಕಿಬಿದ್ದುಬಿಟ್ಟನು.

ತರುವಾಯ ಉಭಯಪಕ್ಷಗಳಿಗೂ ಈಟಿ ಯುದ್ಧವೂ, ನಂತರ ಬಾಹು ಯುದ್ಧವೂ ನಡೆಯಿತು. ರೂಪಧರನ ಶತ್ರುಗಳೆಲ್ಲಾ ಹತ ರಾದರು. ಇಬ್ಬರು ನಿರಪರಾಧಿಗಳನ್ನುಮಾತ್ರ ಆತನು ಜೀವದೊಂದಿಗೆ ಬಿಟ್ಟನು. ಚೆಲ್ಲಾ ಪಿಲ್ಲಿಯಾಗಿ ಬಿದ್ದಿದ್ದ ಶವಗಳನ್ನು ಹೊರಕ್ಕೆ ಸಾಗಿಸಿ ನಡುಮನೆ ಶುಭ್ರಗೊಳಿಸಿದನಂತರ ಧೂಪಹಾಕಿಸಿದನು.

[ಮುಂದಿನ ಸಂಚಿಕೆಯಲ್ಲಿ ಮುಕ್ತಾಯ]



# ಕಷ್ಟಸುಖಗಳು

ಬೇಸರ ಹೊಂದದ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ ಮರದಿಂದ ಶವವನ್ನು ಕೆಳಕ್ಕೆ ಇಳಿಸಿ ಭುಜದಮೇಲೆ ಹಾಕಿಕೊಂಡು ಶ್ಮಶಾನದತ್ತ ಎಂದಿನಂತೆ ಮೌನವಾಗಿ ನಡೆಯ ತೊಡಗಿದನು. ಆಗ ಬೇತಾಳ "ರಾಜನೇ, ರಾಜರು ಭೋಗಲಾಲಸರು. ಆದರೆ ಕೆಲವು ಅರಸರು ಇದ್ದ ಸುಖಸಾಲದೆ ಮನೋವ್ಯಥೆ ಯನ್ನು ಅನುಭವಿಸುತ್ತಾರೆ. ಸತ್ಯಜಿತ್ತಮಹಾ ರಾಜನೇ ಇದಕ್ಕೆ ನಿದರ್ಶನ. ಅವನ ಕಥೆಯನ್ನು ಹೇಳುತ್ತೇನೆ, ಕೇಳು" ಎಂದು ಈ ರೀತಿ ನಿರೂಪಿಸಲಾರಂಭಿಸಿತು :

ಹಸ್ತಿನಾಪುರವನ್ನು ಪರಿಪಾಲಿಸಿದ ರಾಜ ರಲ್ಲಿ ಸತ್ಯಜಿತ್ತ ಮಹಾರಾಜನೂ ಒಬ್ಬನು. ಆತನ ಕಾಲದಲ್ಲಿ ದೇಶ ಸುಭಿಕ್ಷವಾಗಿತ್ತು. ಪ್ರಜೆಗಳು ಯುದ್ಧಭಯ, ಚೋರಭಯ, ಮತ್ತು ಅಗ್ನಿಭಯಗಳನ್ನು ಅರಿಯರು. ದೇಶ ದಲ್ಲಿ ಧರ್ಮವು ನೆಲಸಿ, ಪ್ರಜೆಗಳು ಸುಖ ಶಾಂತಿಗಳಿಂದ ಜೀವಿಸುತ್ತಿದ್ದರು.

ಬೇತಾಳ ಕಥೆಗಳು



ಇನ್ನು ರಾಜನ ವಿಚಾರ ಹೇಳಬೇಕಾಗಿಲ್ಲ. ಆತನ ವೈಭೋಗ ಇಂದ್ರಭೋಗವನ್ನು ಮೀರಿ ಸಿತ್ತು. ಎಲ್ಲ ರೀತಿಯ ಸೌಖ್ಯಗಳನ್ನು ಆತನು ಅನುಭವಿಸಿದನು. ಆದರೆ ಬರಬರುತ್ತಾ ಆತನ ಮನಸ್ಸಿನಲ್ಲಿ ಚಿಂತೆ ಮೂಡಿತು. ಕೊಂಚ ಕಾಲಕ್ಕೆ ಆತನಿಗೆ ಆನಂದ ಅನುಭವಿಸುವ ಶಕ್ತಿಸಂಪೂರ್ಣವಾಗಿ ನಶಿಸಿತು. ರಾಜವೈದ್ಯ ರೆಲ್ಲರೂ ಸೇರಿ ಆತನ ಕಳವಳವನ್ನು ತೊಲ ಗಿಸಲು ಸತತಪ್ರಯತ್ನಮಾಡಿದರು. ಆದರೆ ಒಂದೂ ಫಲಿಸಲಿಲ್ಲ. ಮಂತ್ರಿಗಳು "ಮಹಾ ಪ್ರಭು, ನಿಮ್ಮ ಕೋರಿಕೆಯನ್ನು ತಿಳಿಸಿ. ಅದೆಷ್ಟೇ ಕಷ್ಟವಾದರೂ ಸಾಧಿಸಿ ನಿಮಗೆ ಆನಂದವನ್ನುಂಟುಮಾಡುತ್ತೇವೆ. ನಮ್ಮಲ್ಲಿ ಮುಚ್ಚಿಡಬೇಕಾಗಿಲ್ಲ" ಎಂದನು.

ರಾಜನು ನಿಟ್ಟುಸಿರುಬಿಡುತ್ತಾ "ನಾನೇನು ನೋಡಿ ಆನಂದಿಸಲಿ? ಜೀವನವೆಲ್ಲ ಹಿಪ್ಪೆಯಂ ತಾಗಿದೆ. ಯಾವುದರಲ್ಲೂ ಹೊಸತನ ಕಾಣಿ ಸದು" ಎಂದನು.

ರಾಜನಿಗೆ ವೈರಾಗ್ಯವುಂಟಾಗಿದೆ ಎಂದು ಭಾವಿಸಿ ಮಂತ್ರಿಗಳು ಕೆಲವು ತತ್ವಜ್ಞಾನಿ ಗಳನ್ನು ಬರಮಾಡಿಸಿ, ಅವರಿಂದ ವೇದಾಂತ ಉಪನ್ಯಾಸಗಳನ್ನು ಏರ್ಪಡಿಸಿದರು. ಆದರೆ ವೇದಾಂತಿಗಳ ಸಂಭಾಷಣೆ, ಸಹವಾಸ ರಾಜ ನಿಗೆ ಮತ್ತಷ್ಟು ಬೇಸರವನ್ನುಂಟು ಮಾಡಿತು.

ಹೀಗಿರಲು ಒಂದುದಿನ ರಾಜನ ಭವನಕ್ಕೆ ಶೌನಕಮುನಿ ಬಂದನು. ಮಂತ್ರಿಗಳು ಆತ ನೊಂದಿಗೆ ರಾಜನ ಮನೋವ್ಯಾಧಿಯನ್ನು ಕುರಿತು ಹೇಳಿದರು. "ಸ್ವಾಮಿ, ನಮ್ಮ ಮಹಾರಾಜರಿಗೆ ಲೌಕಿಕ ಸುಖಗಳಲ್ಲಿ ಅಸಂ ತೃಪ್ತಿಯುಂಟಾಗಿದೆ. ಆತನಿಗೆ ಹೊಸಸುಖ ಗಳನ್ನುಹುಟ್ಟಿಸಲು ಅಶಕ್ತರಾಗಿದ್ದೇವೆ. ಯಾವು ದಾದರೂ ಮಾರ್ಗವನ್ನು ಸೂಚಿಸುವ ಕೃಪೆ ತೋರಬೇಕು" ಎಂದು ಪ್ರಾರ್ಥಿಸಿದರು.

ಶೌನಕಮುನಿ ತಲೆದೂಗಿ "ನಿಮ್ಮ ರಾಜ ನಿಗೆ ಬೇಕಾದ ಹೊಸ ಸುಖಗಳನ್ನು ನಾನು ತೋರಿಸುತ್ತೇನೆ" ಎಂದನು.

ನಂತರ ಆತನು ಒಳಗೆ ಪ್ರವೇಶಿಸಿ ರಾಜ ನನ್ನು ಕಂಡು "ಮಹಾರಾಜ, ನಿನಗೊಂದು ಪುಟ್ಟಸಹಾಯ ಮಾಡಿಹೋಗಲು ಬಂದಿರು ವೆನು. ಮಹಡಿಯಮೇಲಿರುವ ಏಕಾಂತ ಗೃಹಕ್ಕೆ ಹೋಗೋಣ ನಡಿ" ಎಂದನು.

ರಾಜನು ಭಕ್ತಿಯಿಂದ ಶೌನಕ ಮಹಾಮುನಿಗೆ ನಮಸ್ಕಾರಮಾಡಿ, ಆತನನ್ನು ತನ್ನ ರಹಸ್ಯಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಇಬ್ಬರೂ ಕುಳಿತುಕೊಂಡರು.

"ರಾಜನೇ, ದಕ್ಷಿಣದಕಡೆಯಿರುವ ಗವಾಕ್ಷದಬಳಿಗೆ ಹೋಗಿ ಅಲ್ಲಿ ಕಾಣಿಸುವುದನ್ನು ನೋಡಿ ಬಾ" ಎಂದ ಮಹಾಮುನಿ.

ರಾಜನು ಎದ್ದು ಹೋಗಿ ದಕ್ಷಿಣದಕಡೆಯಿದ್ದ ಗವಾಕ್ಷದಮೂಲಕ ನೋಡಿದನು. ಆತನ ಎದೆ ಕ್ಷಣಕಾಲ ನಿಂತಂತಾಯಿತು. ತನ್ನ ಕೋಟೆಯ ಹೊರಗೆ ಶತ್ರುಗಳಶಿಬಿರ ಕಾಣಿಸಿತು. ಲಕ್ಷಾಂತರ ಮಂದಿ ಸೈನಿಕರು ಕೋಟೆಯ ಗೋಡೆಯನ್ನೇರುತ್ತಾ ಭಯಂಕರವಾಗಿ ಕೂಗುತ್ತಿದ್ದರು. ರಾಜನು ಮುನಿಯಬಳಿಗೆ ಹಿಂತಿರುಗಿ "ಸ್ವಾಮಿ, ನನ್ನಮೇಲೆ ನೆರೆಹೊರೆಯ ರಾಜರೆಲ್ಲ ದಂಡೆತ್ತಿ ಬರುತ್ತಿದ್ದಾರೆ" ಎಂದನು.

"ಅವರು ಯಾರೋ ಸರಿಯಾಗಿ ನೋಡು" ಎಂದ ಮುನಿ. ರಾಜನು ಮತ್ತೆ ಗವಾಕ್ಷದಿಂದ ನೋಡಲು ಅಲ್ಲೇನೂ ಕಾಣಿಸಲಿಲ್ಲ.

ತರುವಾಯ ರಾಜನು ಪೂರ್ವದಿಕ್ಕಿನಲ್ಲಿದ್ದ ಗವಾಕ್ಷಿಯಿಂದ ನೋಡಲು ಯಮುನಾ ನದಿಯ ಪ್ರವಾಹ ದೇಶದ ಬಹುಭಾಗವನ್ನು ಮುಳುಗಿಸಿದಂತೆಯೂ, ನದಿಯ ಅಲೆ ಕೋಟೆಯನ್ನು ಪ್ರವೇಶಿಸುತ್ತಿರುವಂತೆಯೂ ಕಾಣಿಸಿತು. ಆದರೆ ಇನ್ನೊಮ್ಮೆ ನೋಡಲು ಅದೆಲ್ಲ ಮಾಯವಾಗಿತ್ತು. ತರುವಾಯ ರಾಜನು ಉತ್ತರ ದಿಕ್ಕಿನಲ್ಲಿದ್ದ ಗವಾಕ್ಷಿಯಿಂದ ನೋಡಿ




ದನು. ಹಸ್ತಿನಾಪುರಯಾವತ್ತೂ ಉರಿಯುತ್ತಿರುವಂತೆ ಕಂಡುಬಂತು. ರಾಜನು ಭಯದಿಂದ ಕಣ್ಣು ಮುಚ್ಚಿಕೊಂಡನು. ಕ್ಷಣಕಾಲದನಂತರ ಕಣ್ಣುತೆರೆದು ನೋಡಲು ನಗರ ಎಂದಿನಂತಿತ್ತು.

ನಂತರ ಪಶ್ಚಿಮದಿಕ್ಕಿನಲ್ಲಿದ್ದ ಗವಾಕ್ಷಿಯಿಂದ ಹೊರಗೆ ನೋಡಿದನು ರಾಜ. ಹಚ್ಚನೆಯ ಪೈರಿನಿಂದ, ಫಲಪುಷ್ಪಗಳಿಂದ ಕಂಗೊಳಿಸುತ್ತಿದ್ದ ಪ್ರದೇಶವೆಲ್ಲಾ ಬೆಂಗಾಡಾಗಿತ್ತು. ಅಲ್ಲಲ್ಲಿ ಕಲ್ಲು ಬಂಡೆಗಳು, ಪ್ರಾಣಿಗಳ ಅಸ್ತಿಪಂಜರಗಳು ಕಾಣಿಸಿದುವು. ರಾಜನ ನಯನಗಳಿಂದ ನೀರು ಧಾರಾಕಾರವಾಗಿ ಹರಿಯಲಾರಂಭಿಸಿತು. ಆತನು ಕಣ್ಣೊರಸಿಕೊಂಡು ಮತ್ತೆ ನೋಡಲು, ಮೊದಲಿನಂತೆ ಪೈರುಪಚ್ಚೆಗಳೂ,

ಫಲಪುಷ್ಪಗಳೂ ಕಂಡುಬಂದುವು. ರಾಜನು ತನ್ನ ಆಸನದಬಳಿಗೆ ಬಂದು "ಸ್ವಾಮಿ, ನಾನು ಕಂಡ ದೃಶ್ಯಗಳು ದಿಟವೋ, ಇಲ್ಲ ಬರಿಭ್ರಮೆಯೋ ತಿಳಿಸಬೇಕು. ಅವು ಹಿಂದೊಮ್ಮೆ ನಡೆದ ಘಟನೆಗಳೋ, ಇಲ್ಲ ಮುಂದೆ ನಡೆಯಲಿರುವ ದೃಶ್ಯಗಳೋ ದಯವಿಟ್ಟು ತಿಳಿಸುವ ಕೃಪೆದೋರಬೇಕು" ಎಂದು ವಿನಯದಿಂದ ಪ್ರಾರ್ಥಿಸಿಕೊಂಡನು.

"ಮಗೂ, ಒಂದುಸಾರಿ ನಡೆದಿದ್ದೇ ಮತ್ತೆ ನಡೆಯುತ್ತದೆ. ನಿನ್ನೆ ನಡೆದುದನ್ನು, ನಾಳೆ ನಡೆಯುವುದನ್ನು ಇಂದೇ ಕಂಡರೆ ನಾವು ಅದನ್ನು ಭ್ರಮೆಯೆಂದು ಭಾವಿಸುತ್ತೇವೆ. ನೀನು ಕಂಡ ದೃಶ್ಯಗಳು ನಿನಗೆ ತುಂಬಾ ನೋವುಂಟುಮಾಡಿರಬೇಕಲ್ಲವೇ? ಪಾಪ. ನೀನು ಈಗ ಕೊಳಕ್ಕೆ ಹೋಗಿ ಸ್ನಾನಮಾಡಿಕೊಂಡು ಬಾ" ಎಂದನು ಮುನಿವರ್ಯ.

ರಾಜನು ಮುನಿಯನ್ನು ಸಂಗಡ ಕರೆದುಕೊಂಡು ತನ್ನ ಉದ್ಯಾನದಲ್ಲಿದ್ದ ಕೊಳದ ಬಳಿಗೆ ಹೋದನು. ಮುನಿ ದಂಡೆಯಮೇಲೆ ಕುಳಿತಿರಲು ರಾಜನು ಸ್ನಾನಮಾಡಲು ಕೊಳಕ್ಕೆ ಇಳಿದನು. ರಾಜನು ಒಂದುಸಾರಿ ನೀರಿನಲ್ಲಿ ಮುಳುಗು ಹಾಕಿದಕೂಡಲೇ ನೀರು ಪೂರಾ ಅಲ್ಲಕಲ್ಲೋಲವಾದಂತೆ ತೋರಿತು. ತಾನೊಂದು ಸಮುದ್ರದಲ್ಲಿ ಮುಳುಗಿರುವಂತೆಯೂ, ಮತ್ತು ತಾನು ಬಿರುಗಾಳಿಯ ಹೊಡೆತಕ್ಕೆ ಸಿಲುಕಿರುವಂತೆಯೂ ರಾಜನಿಗೆ ತೋರಿತು. ಆತನು ಭಾರಿಭಾರಿ ಅಲೆಗಳ ಹೊಡೆತಕ್ಕೆ ಸಿಲುಕಿ, ಅತೀಪ್ರಯಾಸದಿಂದ



ಈಜಿಕೊಂಡು ದಡವನ್ನು ಸೇರಿದನು. ತಲೆ ಎತ್ತಿನೋಡಲು ಆತನಿಗೆ ಕೆಲವು ಹಳ್ಳಿಗರು ಕಾಣಿಸಿದರು. ಅವರು ರಾಜನನ್ನು ವಿಸ್ಮಯದಿಂದ ನೋಡುತ್ತಿದ್ದರು.

"ಯಾಕೆ ಹಾಗೆ ಮಂಕರಂತೆ ನೋಡುತ್ತಿರುವಿರಿ? ನಾನು ಹಸ್ತಿನಾಪುರದ ಅರಸ ಸತ್ಯಜಿತ. ನಡೆಯಿರಿ ಇಲ್ಲಿಂದ" ಎಂದು ಗದರಿದನು. ಹಳ್ಳಿಗರು ಗೊಳ್ಳನೆ ನಕ್ಕರು. ಅವರಲ್ಲೊಬ್ಬನು ರಾಜನನ್ನು ಸಮೀಪಿಸಿ "ತಲೆಯಮೇಲೇಕೆ ಹಿತ್ತಾಳೆಟೋಪಿ. ಮೈಮೇಲೇಕೆ ಅಂಗವಸ್ತ್ರ? ಕೆಲಸ ಮಾಡುವಾಗ ಅಡಚಣೆಯಾಗೋಲ್ಲವೇ?" ಎಂದು ಹೇಳುತ್ತಾ ರಾಜನ ಕಿರೀಟವನ್ನೂ, ಅಂಗವಸ್ತ್ರವನ್ನೂ ತೆಗೆದು ನೀರಿಗೆಸೆದನು. "ಪಾಪ, ಪರದೇಶಕ್ಕೆ ಬಂದೆ. ಮೈಮುರಿದು ಕೆಲಸಮಾಡಿದಹೊರತು ಇಲ್ಲಿ ಜೀವಿಸುವಂತಿಲ್ಲ. ಈ ಹಾರೆ, ಗುದ್ದಲಿಗಳನ್ನು ತಲೆಯಮೇಲಿಟ್ಟುಕೊಂಡು ನನ್ನೊಂದಿಗೆ ಬಾ. ನಾವೀಗ ಹೊಲದಕೆಲಸ ಮುಗಿಸಿಕೊಂಡು ಮನೆಗೆ ಹಿಂತಿರುಗುತ್ತಿದ್ದೇವೆ" ಎಂದನು. ರಾಜನು ಕೋಪದಿಂದ ಕಿಡಿಕಿಡಿಯಾದನು. ಆದರೆ ಬೇರೆಮಾರ್ಗವಿಲ್ಲದೆ "ಭಾರ ಹೊರುವ ಅಭ್ಯಾಸ ನನಗಿಲ್ಲ" ಎಂದನು.

"ಮಾನವನಾಗಿದ್ದೂ ಎತ್ತೂ ಸಹ ಮಾಡುವ ಕೆಲಸವನ್ನು ಮಾಡಲು ಸಾಧ್ಯವಿಲ್ಲವೆಂದು ಹೇಳುವೆಯಲ್ಲಾ ನಾಚಿಕೆಯಾಗೋಲ್ಲವೆ?" ಎಂದು ಹೇಳಿ ಅವನು ಹಾರೆ ಗುದ್ದಲಿಗಳನ್ನು ಗಂಟುಕಟ್ಟಿ ರಾಜನ ತಲೆಯಮೇಲಿಟ್ಟನು. ರಾಜನು ಆ ಭಾರವನ್ನು ಹೊರಲಾರದೆ





ಹೊತ್ತುಕೊಂಡು ಅವನ ಸಂಗಡ ಹೋದನು. ಮನೆ ಸೇರಿದಕೂಡಲೇ ಹಳ್ಳಿಗನು ತನ್ನ ಹೆಂಡತಿಯೊಂದಿಗೆ "ಲೋ, ಇವನಿಗೆ ಮಾನವರು ಮಾಡುವ ಕೆಲಸಕಾರ್ಯಗಳು ಮಾಡಲು ಸಾಧ್ಯವಿಲ್ಲವಂತೆ. ಈಗ ಎತ್ತುಗಳು ಮಾಡುವ ಕೆಲಸವನ್ನು ಕಲಿಯುತ್ತಿದ್ದಾನೆ. ಇವನನ್ನು ನಮ್ಮ ದನದ ದೊಡ್ಡಿಯಲ್ಲಿ ಕಟ್ಟಿಹಾಕಿ ದಾಣಾ ಹಾಕು" ಎಂದನು.

ರಾಜನು ಆ ರಾತ್ರಿ ಹುರುಳಿ ತಿಂದು ಮಾರನೇಯ ದಿನ ಎತ್ತಾಗಿ ಬದಲಾಯಿಸಿಬಿಟ್ಟನು. ಹಳ್ಳಿಗನು ರಾಜನಿಂದ ಎತ್ತುಗಳ ಕೆಲಸ ಕಾರ್ಯಗಳನ್ನು ಮಾಡಿಸಲು ಬಹು ಪ್ರಯತ್ನಿಸಿದನು. ರಾಜನು ಬಸವನ ಕೆಲಸ ಮಾಡಲು ನಿರಾಕರಿಸಿದನು. ರೈತನಿಗೆ ಸಿಟ್ಟು ಬಂತು. ಅವನು ಎತ್ತನ್ನು ಗಾಣಿಗನಿಗೆ ಮಾರಿಬಿಟ್ಟನು. ಗಾಣಿಗನು ಎತ್ತಿಗೆ ಕಪಡಕಟ್ಟಿ ಗಾಣಕ್ಕೆ ಹೂಡಿ ಸದಾ ಆದರಿಂದ ದುಡಿಸುತ್ತಿದ್ದನು. ಪಾಪ, ಎತ್ತು ಆಯಾಸ ಪರಿಹರಿಸಿಕೊಳ್ಳಲು ತುಸಹೊತ್ತು ನಿಂತರೆ ಕೋಲಿನಿಂದ ಹೊಡೆಯುವನು. ದಿನಕ್ಕೆರಡುಬಾರಿ ಮಾತ್ರ ಮೇವು ತಿನ್ನಲು ಕೊಂಚಹೊತ್ತು ನಿಲ್ಲುತಿತ್ತು ಆ ಎತ್ತು. ಹೀಗೆ ಐದು ವರ್ಷಗಳು ಕಳೆದನಂತರ ಒಂದು ದಿನ ಗಾಣದ ಮೇಲ್ಭಾಗವು ಕಳಚಿಕೊಂಡು ಎತ್ತಿನಮೇಲೆ ಬಿತ್ತು. ಅದು ವಿಸ್ಮೃತಿಹೊಂದಿತು.

ಮತ್ತೆ ಸ್ಮೃತಿಬಂದಾಗ ರಾಜನು ಮಾನವ ರೂಪದಲ್ಲಿ ಬೇರೊಂದು ಹೊಸ ದೇಶದಲ್ಲಿದ್ದನು. ಅನತಿದೂರದಲ್ಲಿದ್ದ ಕೊಳದಬಳಿ ಕೆಲವು ಹೆಂಗುಸರು ಬಟ್ಟೆ ಒಗೆಯುತ್ತಿದ್ದರು. ಕೆಲವಾರು ಸ್ತ್ರೀಯರು ಸ್ನಾನಮಾಡುತ್ತಿದ್ದರು. ರಾಜನಿಗೆ ಅಸಾಧ್ಯ ಹಸಿವಾಗಿತ್ತು. ಅಷ್ಟರಲ್ಲಿ ಯಾರೋ ಒಬ್ಬ ವ್ಯಕ್ತಿ ರಾಜನನ್ನು ಸಮೀಪಿಸಿ "ಯಾರು ನೀನು. ಪರಸ್ಥಳದವನಂತೆ ತೋರುವುದು" ಎಂದು ಮಾತನಾಡಿಸಿದನು.

"ಹೌದು, ನಮ್ಮದು ಪರಸ್ಥಳ. ನನಗೆ ಬಹಳ ಹಸಿವಾಗುತ್ತಿದೆ. ಮಾತನಾಡಲೂ ಶಕ್ತಿಯಿಲ್ಲ" ಎಂದನು.

"ಈ ದೇಶದಲ್ಲಿ ಹೆಂಡತಿ ಕೈಯಿಂದ ಕೊಟ್ಟ ಹೊರತು ಯಾರಿಗೂ ಆಹಾರ ಪಾನೀಯಗಳು ಸಿಗುವುದಿಲ್ಲ. ನಿನಗೆ ಮದುವೆಯಾಗಿದೆಯೇ? ಹೆಂಡತಿಯಿದ್ದಾಳೆಯೇ?" ಎಂದು ಕೇಳಿದನು.

"ಮದುವೆಯೇನೋ ಆಗಿದೆ. ಆದರೆ ಹೆಂಡತಿ ನಮ್ಮ ದೇಶದಲ್ಲಿದ್ದಾಳೆ" ಎಂದ ರಾಜ.

"ಹಾಗಾದರೆ ಕನ್ಯೆಯೊಬ್ಬಳನ್ನು ಕೂಡಲೇ ವಿವಾಹವಾಗು. ನಿನಗೆ ತಿಂಡಿ ಸಿಗುತ್ತದೆ" ಎಂದನಾ ವ್ಯಕ್ತಿ. "ಹೇಗೆ ಮದುವೆಯಾಗಲಿ?" ರಾಜನು ಕೇಳಿದನು.

"ಆ ಕೊಳದಿಂದ ಬರುವ ಪ್ರತಿ ಸ್ತ್ರೀಯನ್ನೂ 'ನಿನಗೆ ಮದುವೆಯಾಯಿತೇ? ಇಲ್ಲ ಒಬ್ಬೊಂಟಿಗಳಾಗಿರುವೆಯಾ?' ಎಂದು ಕೇಳು. ಯಾರನ್ನೂ ಕೇಳದೆ ಬಿಡಲಾಗದು, ತಿಳಿಯಿತೇ? ಅವರಲ್ಲಿ ಏಕಾಂಗಿನಿಯಾಗಿರುವವಳು ಯಾರಾದರೂ ಇದ್ದರೆ ಕೂಡಲೇ ಆಕೆ ನಿನ್ನ ಮಡದಿಯಾಗುವಳು" ಎಂದು ಹೇಳಿ ಆತ ಹೊರಟುಹೋದನು.

ರಾಜನು ಅಲ್ಲೇ ನಿಂತು ಕೊಳದಕಡೆ ನೋಡಿದನು. ಹದಿನಾರು ವರ್ಷದ ಸುಂದರ ಯುವತಿಯೊಬ್ಬಳು ಕಂಕುಳಲ್ಲಿ ಕೊಡಹಿಡಿದು ಅತ್ತ ಬಂದಳು. "ಅಮ್ಮಯ್ಯಾ, ನಿನಗೆ ಮದುವೆಯಾಗಿದೆಯೇ? ಇಲ್ಲ ಒಬ್ಬೊಂಟಿಗಳಾಗಿರುವೆಯಾ?" ಎಂದು ರಾಜನು ಕೇಳಿದನು.

"ಕಳೆದ ವರ್ಷ ಮದುವೆಯಾಯಿತು" ನಸುನಾಚಿ ನುಡಿದಳು ಆ ತರುಣಿ. ಆಕೆ ಹೋದನಂತರ ಐವತ್ತು ವರ್ಷದ ಸ್ತ್ರೀಯೊಬ್ಬಳು ಬಂದಳು. ರಾಜನು ಸಂಕೋಚದಿಂದ ಆಕೆಯನ್ನು ಅದೇ ರೀತಿ ಪ್ರಶ್ನಿಸಿದನು. "ಮದುವೆಯಾಯಿತು, ಮಗು" ಎಂದು ಹೇಳಿ ಆಕೆ ತನ್ನ ದಾರಿ ಹಿಡಿದಳು. ಆಕೆಯ ನಂತರ ಎಂಬತ್ತು ವರ್ಷದ ಬೊಕ್ಕಬಾಯಿಯ



ಹಣ್ಣುಹಣ್ಣು ಮುದುಕಿಯೊಬ್ಬಳು ಕೋಲು ಹಿಡಿದುಕೊಂಡು ಮೆಲ್ಲನೆ ನಡೆಯುತ್ತಾ ಬಂದಳು. ರಾಜನು ನಗುತ್ತಾ ಆಕೆಯನ್ನು ಯಥಾಪ್ರಕಾರ ಪ್ರಶ್ನಿಸಿದನು. "ನಾನು ಏಕಾಂಗಿನಿ. ಮನೆಗೆ ಹೋಗುವ ನಡಿ" ಎಂದು ವೃದ್ಧಳು ರಾಜನ ಕೈ ಹಿಡಿದುಕೊಂಡಳು. ರಾಜನು ಬಿಡಿಸಿಕೊಳ್ಳಲು ಪ್ರಯತ್ನಿಸಲು ಆ ಮುದುಕಿ ಗಟ್ಟಿಯಾಗಿ ಕಿರಿಚಿಕೊಂಡಳು. ರಾಜನು ಯುಕ್ತಿಯಿಂದ ಬಿಡಿಸಿಕೊಂಡು ಕೊಳದಬಳಿಗೆ ಓಡಿ, ನೀರಿಗೆ ಹಾರಿದನು.

ರಾಜನು ನೀರಿನಿಂದ ತಲೆ ಎತ್ತಲು ಅವನು ತನ್ನ ಉದ್ಯಾನದಲ್ಲಿದ್ದ ಕೊಳದಲ್ಲಿದ್ದನು. ದಡದ ಮೇಲೆ ಮುನಿ ಇರಲಿಲ್ಲ. ರಾಜನು ಸ್ನಾನ ಮುಗಿಸಿಕೊಂಡು ಅರಮನೆಗೆ ಬಂದನು. ಈಗ ಆತನಿಗೆ ಯಾವುದನ್ನು ಕಂಡರೂ ಚಿರನೂತನ ವಾಗಿ, ರಮ್ಯವಾಗಿ ಕಾಣಿಸತೊಡಗಿತು. ಅರ ಮನೆ ಸ್ವರ್ಗದಂತಿತ್ತು. ಮಡದಿಯರು ಅಪ್ಸ ರೆಯರಂತೆ ತೋರಿದರು."

ಬೇತಾಳ ಈ ಕಥೆ ಹೇಳಿ "ಎಲೈ, ರಾಜನೇ, ನನಗೊಂದು ಸಂದೇಹ ಬಂದಿದೆ. ಶೌನಕ ಮುನಿ ರಾಜನ ಮನೋವ್ಯಾಧಿಯನ್ನು ಗುಣ ಪಡಿಸಿದುದು ಹೇಗೆ? ಆತನು ರಾಜನಿಗೆ ಹೊಸ ಸುಖಭೋಗಗಳನ್ನು ಕಲ್ಪಿಸುವ ಬದಲು ಕಷ್ಟ ಕೋಟಲೆಗಳಿಗೆ ಗುರಿಮಾಡಿದನಷ್ಟೆ! ಇದರ ರಹಸ್ಯ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳಾದೀತು ಜೋಕೆ" ಎಂದನು.

"ಸುಖಭೋಗಗಳಿಗೆ ಕೊನೆಮೊದಲೆಲ್ಲಿ? ಸತ್ಯಜಿತ್ತನಿಗೆ ಸಕಲ ಸುಖಗಳಿದ್ದೂಸಹ ಅನು ಭವಿಸುವ ಶಕ್ತಿಯನ್ನು ಕಳೆದುಕೊಂಡಿದ್ದನು. ಶೌನಕಮುನಿ ಹೊಸಸುಖಗಳನ್ನು ಕಲ್ಪಿಸಿದ್ದರೂ ಕೇವಲ ಕೆಲವೇ ದಿನಗಳಲ್ಲಿ ಅವನಿಗೆ ಅದರ ಮೇಲೂ ಬೇಸರವಾಗುತಿತ್ತು. ಅಂತಲೇ ಮುನಿ ರಾಜನಿಗೆ ಸುಖಭೋಗಗಳನ್ನು ಅನುಭ ವಿಸುವ ಶಕ್ತಿಯನ್ನು ಮತ್ತೆ ಪ್ರಸಾದಿಸಿದನು. ಇದು ಕಷ್ಟಗಳನ್ನು ಅನುಭವಿಸುವುದರಿಂದ ಮಾತ್ರವೇ ಪುನರುಜ್ಜೀವನ ಪಡೆಯುವುದು" ಎಂದು ತ್ರಿವಿಕ್ರಮನು ಉತ್ತರಕೊಟ್ಟನು.

ರಾಜನಿಗೆ ಈ ಪ್ರಕಾರ ಮೌನಭಂಗವಾದ ಕೂಡಲೇ ಬೇತಾಳ ಶವದೊಂದಿಗೆ ಮಾಯ ವಾಗಿ ಮರವನ್ನೇರಿತು.





# ಪ್ರಕೃತಿಯ ಸೋಜಿಗಗಳು

## 5

ನಾವು ಝರಿಯ ಬದಿಗೆ ಸಮೀಪಿಸಿದಾಗ ಆತ ಕತ್ತಿಯನ್ನು ಮೇಲಕ್ಕೆತ್ತಿದ. ಅದಕ್ಕೊಂದು ಅಗಲವಾದ ಟೇಕಿಮೀನು ಚುಚ್ಚಿಕೊಂಡಿತ್ತು. ಅದಕ್ಕೆ ನೀಳವಾದ ಬಾಲವೂ, ಅದರ ಕೊನೆಯಲ್ಲೊಂದು ಹರಳೂ ತೋರಿತು. ಅದು ಬಾಲವನ್ನು ಬೀಸುತ್ತ ಕುಮೇವಾವಾನನ್ನು ಚುಚ್ಚಲು ಪ್ರಯತ್ನಿಸುತ್ತಿತ್ತು.

ಆ ಹುಡುಗ ಆ ಮೀನನ್ನು ಕುರಿತು ನನಗೆ ಹೇಳಿದ. ಅದು ಆಳವಿಲ್ಲದ ನೀರಿನಲ್ಲಿ ಮಣ್ಣಿನೊಳಗೂ ಕೆಸರಿನೊಳಗೂ ತೂರಿಕೊಂಡಿರುವುದಂತೆ. ಯಾರಾದರೂ ಅದರಮೇಲೆ ಕಾಲಿಟ್ಟ ಕೂಡಲೇ ಬಾಲದಲ್ಲಿರುವ ಹರಳಿನ ಮೊನೆಯಿಂದ ಚುಚ್ಚುತ್ತದಂತೆ. ಅದರಿಂದ ಪ್ರಾಣ ಹೋಗದಿದ್ದರೂ, ತಾಳಲಾರದಷ್ಟು ನೋವಾಗುವುದಂತೆ. ಅದಕ್ಕಾಗಿಯೇ ಆತ ನೀರಿನಲ್ಲಿ ಕತ್ತಿಯನ್ನು ಚುಚ್ಚುತ್ತಾ ಬಂದುದು.

ಎರಡು ಗಂಟೆಹೊತ್ತು ಹುಟ್ಟು ಹಾಕುತ್ತಾ ನಾವು ನಮ್ಮ ನೌಕೆ ಮುಳುಗಿದ್ದ ಸ್ಥಳಕ್ಕೆ ಬಂದೆವು. ಮಧ್ಯಾಹ್ನವಾಯಿತು. ಸೂರ್ಯನು ನಡುನೆತ್ತಿಗೇರಿದ. ಬಹಳವಾಗಿ ಹಸಿದಿದ್ದ ನನ್ನ ಅನುಚರರು ನಮ್ಮನ್ನು ನೋಡಿ ಬಹಳ ಸಂತೋಷಪಟ್ಟರು.

ನಾವು ಹದಿನಾರು ಮೀನುಗಳನ್ನು ತಂದಿದ್ದೆವು. ಒಂದು ಮಣಕ್ಕಿಂತ ಹೆಚ್ಚು ಭಾರವಾದ ಮೀನುಗಳೂ ಕೆಲವಿದ್ದುವು. ಇವುಗಳನ್ನು ಸುಡಲು ಆ ಹುಡುಗ ಕೋಲುಗಳನ್ನು ತಯಾರುಮಾಡಿದ.

ಮುಳುಗಿರುವ ನೌಕೆಯನ್ನು ಬದಿಗೆಳೆದು ದುರಸ್ತಿಮಾಡಿಸಲಿಕ್ಕೆ, ಮೊದಲು ಹನ್ನೊಂದು ಗಜ ಉದ್ದದ ಹಗ್ಗ ಬೇಕಾಗಿತ್ತು. ಆದರೆ ಹಗ್ಗವೇ ಇಲ್ಲ. ಪ್ರಯಾಣಿಕರು ಈ ವಿಷಯವನ್ನೆ ಕುರಿತು ಮಾತಾಡಿಕೊಳ್ಳುವುದನ್ನು ಆ ಹುಡುಗ ಕೇಳಿದ. "ಊಟವಾಗಲಿ; ಆ ಮೇಲೆ ಹಗ್ಗ ತಯಾರಿಸೋಣ" ಎಂದನವ.

ಕೆಲವರಿಗೆ ಇದು ಅಸಂಭವವೆನಿಸಿತು. ಅದನ್ನರಿತು ಆ ಹುಡುಗ "ಕಾಡಿನಲ್ಲಿ

ತಿಬೋರ್ ಸೆಕೆಲ್ಯ



ಮನುಷ್ಯರಿಗೆ ಬೇಕಾದುದೆಲ್ಲಾ ಇದೆ. ಅದನ್ನು ಉಪಯೋಗಿಸಿಕೊಳ್ಳಲು ತಿಳಿದಿರಬೇಕು ಅಷ್ಟೇ" ಎಂದನು.

"ಈ ಹುಡುಗ ನಮಗೆ ಬಹಳ ಸಹಾಯ ಮಾಡುತ್ತಾನೆ. ನಮ್ಮಿಂದೇನು ಪ್ರತಿಫಲ ಕೇಳುತ್ತಾನೋ!.... ಏನೋ ಅಪ್ಪಾ, ಈ ವಿಮಾನುಗಳಿಗೆ ಎಷ್ಟು ದುಡ್ಡು ಕೇಳುತ್ತಿ?" ಎಂದು ನಮ್ಮ ನೌಕೆಯ ಸರಂಗನು ಕೇಳಿದನು.

"ನನಗೆ ಏನೂ ಬೇಡ. ಮನುಷ್ಯನಿಗೆ ಬೇಕಾದುದೆಲ್ಲಾ ಕಾಡಿನಲ್ಲಿ ಸಿಗುತ್ತದೆ" ಎಂದ ಕುಮೇವಾವಾ. ಎಲ್ಲರೂ ಬಹಳ ಮೆಚ್ಚಿಕೊಂಡರು. ಆದರೂ ಪ್ರಯಾಣಿಕರು ತಮಗೆ ತೋರಿದುದನ್ನು ಒಂದು ಚೀಲದಲ್ಲಿ ಹಾಕಿ ಆ ಹುಡುಗನಿಗೆ ಕೊಡಲು ಯೋಚಿಸಿಕೊಂಡರು.

ಊಟವಾದಮೇಲೆ ಕುಮೇವಾವಾ, ಹಗ್ಗದ ಕೆಲಸಕ್ಕೆ, ತನ್ನೊಂದಿಗೆ ಕೆಲವರನ್ನು ಕರೆದುಕೊಂಡು ಹೊರಟ. ಅರವತ್ತು ಗಜ ದೂರ ಹೋದಾಗ ಬೀಸಣಿಗೆಯಂತಹ ಎಲೆಯಿರುವ ಕಂಗಿನ ಜಾತಿಯ ಗಿಡವೊಂದು ಕಂಡಿತು. ಬಹಳ ಎತ್ತರವೇನಿಲ್ಲ. ಹುಡುಗ ಒಂದು ಎಲೆಯನ್ನು ಕಿತ್ತು ಸೀಳಿ ನಾರುಗಳನ್ನು ತೆಗೆದು ತೋರಿಸುತ್ತಾ "ನೋಡಿದಿರಾ ನಿಮ್ಮ ಹಗ್ಗ?" ಎಂದ. ಅವನು ತಮಾಷೆ ಮಾಡುತ್ತಾನೆಂದು ಸರಂಗನಿಗೆ ಕೋಪಬಂತು.

"ತಮಾಷೆಯಲ್ಲವಯ್ಯಾ. ಇಂತಹ ಅನೇಕ ನಾರುಗಳನ್ನು ಕೂಡಿಸಿದರೆ ಚಿಕ್ಕಹಗ್ಗವಾಗುತ್ತದೆ. ಈ ಚಿಕ್ಕಚಿಕ್ಕ ಹಗ್ಗಗಳನ್ನು ಕೂಡಿಸಿ ಹೊಸೆದರೆ ದೊಡ್ಡಹಗ್ಗವಾಗುತ್ತದಲ್ಲಾ, ನೋಡಿ" ಎನ್ನುತ್ತಾ ಆ ಹುಡುಗ ನಾರುಗಳನ್ನು ತನ್ನ ತೊಡೆಮೇಲೆ ಹರಡಿ ಕೈಯಿಂದ ಹೊಸೆದು ದಾರಮಾಡಿಯೇ ತೋರಿಸಿದ. ಬಹಳ ಬಲವಾದ ಹಗ್ಗ. ಅಂತಹ ಮೂರುದಾರಗಳನ್ನು ಕೂಡಿಸಿ ಹೆಣೆದ ಹಗ್ಗವನ್ನು ಆತ ಸರಂಗನ ಕೈಗಿತ್ತ. ಎಳೆದು ನೋಡಿದರೆ ಆ ಹಗ್ಗವನ್ನು ತುಂಡುಮಾಡಲು ಯಾರಿಂದಲೂ ಆಗಲಿಲ್ಲ.

"ಹಗ್ಗವೇನೋ ಚೆನ್ನಾಗಿದೆ. ಆದರೆ ಈ ಲೆಕ್ಕದಲ್ಲಿ ಹನ್ನೊಂದು ಗಜ ಉದ್ದದ ಹಗ್ಗ ಹೆಣೆಯಲು ತಿಂಗಳಾದೀತು!" ಎಂದ ಸರಂಗ.

"ಎಲ್ಲರೂ ಕೂಡಿ ಕೆಲಸ ಮಾಡಿದರೆ ಇಂದೇ ಸಂಜೆಯೊಳಗೆ ಹಗ್ಗವಾಗುತ್ತದೆ. ಈ ಬಗೆಯ

ಗಿಡಗಳನ್ನು ಹುಡುಕಿ ಸಾಧ್ಯವಾದಷ್ಟು ಉದ್ದ ವಾದ ತಿರಿಗಳನ್ನು ತನ್ನಿರಿ. ಹಗ್ಗ ಹೊಸೆ ಯುತ್ತೇನೆ" ಎಂದ ಕುಮೇವಾವಾ.

ನಾವೆಲ್ಲಾ ಆ ಗಿಡವನ್ನು ಹುಡುಕಿಕೊಂಡು ಹೋದೆವು. ಕೆಲವರಿಗೆ ಸಿಕ್ಕಿತು. ಒಬ್ಬೊಬ್ಬರೆ ಆ ಎಲೆಯ ನಾರುಗಳನ್ನು ತೆಗೆದು ತೆಗೆದು ಹುಡುಗನ ಕೈಗೆ ಕೊಡಲು, ಆತ ಹಗ್ಗ ಹೊಸೆಯಲಾರಂಭಿಸಿದ. ಪ್ರಯಾಣಿಕರಲ್ಲಿ ಒಬ್ಬ ಯುವಕಕೂಡಾ ಹಗ್ಗ ಹೊಸೆಯಲು ಕಲಿತುಕೊಂಡ. ತರುವಾಯ ಮೂರನೇಯವ ನೊಬ್ಬ ತಯಾರಾದ. ಆ ಮೂವರೂ ಕೂಡಿ ಹೊಸೆದ ಒಂಬತ್ತು ಹಗ್ಗಗಳು ದಪ್ಪವಾಗಿ ಇಪ್ಪತ್ತುಗಜ ಉದ್ದಕ್ಕೆ ತಯಾರಾದುವು. ಅವು ಗಳನ್ನು ಕೂಡಿಸಿ ಹೆಣೆದಾಗ ೧೫ ಗಜ ನೀಳದ ನೌಕೆಯಹಗ್ಗ ಸಿದ್ಧವಾಯಿತು.

ಕುಮೇವಾವಾನಮೇಲೆ ಎಲ್ಲರ ಗೌರವವೂ ಹೆಚ್ಚಿತು. ಆ ಹಗ್ಗದಿಂದ ಮರುದಿನ ನೌಕೆ ಯನ್ನು ಒಡ್ಡು ಸೇರಿಸಲು ನಿರ್ಣಯವಾಯಿತು. ಕತ್ತಲೆ ಬೀಳುತ್ತಲೇ ನಾವೆಲ್ಲರೂ ಬೆಂಕಿಯ ಸುತ್ತಲೂ ಸೇರಿಕೊಂಡೆವು. ನಮ್ಮಲ್ಲಿ ಒಬ್ಬಳು ಕುಮೇವಾವಾನ ಗಲ್ಲದಲ್ಲಿರುವ ವಲಯ ಮುದ್ರೆಯನ್ನು ಕುರಿತು ಕೇಳಿದಳು. ಹುಡುಗ ಅದರ ಸಂಗತಿಯನ್ನು ವಿವರವಾಗಿ ಹೇಳಿದ.

ಕರಜಾ ಜಾತಿಯ ಇಂಡಿಯನ್ ಬಾಲ ಬಾಲಿಕೆಯರೆಲ್ಲಾ ಈ ಮುದ್ರೆಯನ್ನು ಪಡೆ ಯಲು ಆತ್ಮಾತುರ ಪಡುತ್ತಾರೆ. ಈ ಮುದ್ರೆ ಗಳು ಬಿದ್ದುವೆಂದರೆ ದೊಡ್ಡವರಾದಂತೆ. ಈ



ವಲಯಗಳನ್ನು ಹಾಕಿಸಿಕೊಂಡ ವ್ಯಕ್ತಿ ಬೇರೆಯವರೊಂದಿಗೆ ಕೂಡಿ ಬೇಟೆಯಾಡ ಬಹುದು; ನೃತ್ಯಮಾಡಬಹುದು, ಮಂತ್ರವಿದ್ಯೆ ಕಲಿಯಬಹುದು, ಮದುವೆಕೂಡಾ ಮಾಡಿ ಕೊಳ್ಳಬಹುದು. ಆದರೆ ಈ ವಲಯ ಮುದ್ರೆ ಸುಲಭದಲ್ಲಿ ದೊರೆಯಲಾರದು. ಇದಕ್ಕೆ ವಯಸ್ಸಿನ ನಿರ್ಬಂಧವಿಲ್ಲ. ಇದನ್ನು ಪಡೆಯ ಲಿಚ್ಛಿಸುವವರು ಇನ್ನೊಬ್ಬರ ಸಹಾಯವಿಲ್ಲದೆ ಒಂಟಿಯಾಗಿ ಅಡವಿಯಲ್ಲಿ ಜೀವಿಸಬೇಕು.

ಈ ಜಾತಿಯ ಗಂಡುಮಕ್ಕಳು ಐದನೇ ವಯಸ್ಸಿಗೆ ಬಾಣಬಿಡಲು ಕಲಿಯುತ್ತಾರೆ. ಏಳು ವಯಸ್ಸಿಗೆ ಬಿಲ್ಲುಬಾಣಗಳನ್ನು ಅವರವರೇ ತಯಾರಿಸಿಕೊಳ್ಳುತ್ತಾರೆ. ಒಂಬತ್ತನೇ ವಯಸ್ಸಿಗೆ ಜೇನುಹುಟ್ಟನ್ನು

ತೆಗೆದು ತರುತ್ತಾರೆ. ಯಾರೂ ಸಹಾಯ ಮಾಡುವುದಿಲ್ಲ. ಕುಮೇವಾವಾ ಹೀಗೇ ದೊಡ್ಡವನಾಗಿದ್ದಾನೆ. ಮೀನುಗಳ ಮೃಗಗಳ ಬೇಟೆಗೆ ದೊಡ್ಡವರೊಂದಿಗೆ ಹೋಗುತ್ತಾನೆ. ಹಾಗೇನಾದರೂ ದೊಡ್ಡ ಮೃಗವನ್ನು ಅವನು ಹೊಡೆಯಲಾಗದೇ ಹೋದಾಗ, ಹಿಂದಿನಿಂದ ದೊಡ್ಡವರು ಹೊಡಯುತ್ತಾರೆಯೇ ಹೊರತು, ಅವನನ್ನು ನೋಡಿನಗುವುದಿಲ್ಲ.

ಒಂದುದಿನ ಅವರ ನಾಯಕನು ಕುಮೇವಾವಾನಿಗೆ ಎರಡು ಒಣ ಕೊರಡುಗಳನ್ನು ಕೊಟ್ಟು ಅವುಗಳನ್ನು ಮಥಿಸಿ ಬೆಂಕಿಮಾಡಲು ಹೇಳಿದ. ಎಷ್ಟೋ ಹೊತ್ತು ಮಥಿಸಿದಾಗ ಬೆಂಕಿಹೊರಟಿತು.

ಕಳೆದವರ್ಷವೇ ಅವನನ್ನು ಹದಿನೈದು ವರ್ಷ ವಯಸ್ಸಿನವರೊಂದಿಗೆ ಸೇರಿಸಿದರು. ಒಂದುವರ್ಷ ಅವರು ಕಾಡಿನಲ್ಲೆಲ್ಲಾ ಬೇಟೆಯಾಡಿದರು. ಒಬ್ಬ ಗುರು ಅವರೊಂದಿಗೆ ಇದ್ದು ಬೇಟೆಯನ್ನು ಕಲಿಸಿದ. ಕೊನೆಯ ತಿಂಗಳಿನಲ್ಲಿ ಮಾತ್ರ ಗುರು ಜತೆಯಲ್ಲಿಲ್ಲದೆ, ಹುಡುಗರು ಮಾತ್ರವೇ ಬೇಟೆಯಾಡಿದರು.

ಹೀಗೆ ವಿದ್ಯೆಪೂರ್ಣವಾಗಿ ಅವರು ಗ್ರಾಮಕ್ಕೆ ಹಿಂದಿರುಗಿ ಬರುತ್ತಲೇ ಅಲ್ಲಿ ಅವರಿಗೆ ದೊಡ್ಡ ಪರೀಕ್ಷೆ ಇಟ್ಟರು. ಅವರಿಗೆ ಬಗೆಬಗೆಯ ಅಡವಿ ಮೃಗಗಳ ಕಾಲಿನ ಗುರುತುಗಳನ್ನು ತೋರಿಸಿ, ಆ ಮೃಗಗಳನ್ನು ಹೋಲಿಸಲು ಹೇಳುತ್ತಾರೆ. ತರುವಾಯ ಅವುಗಳನ್ನು ಹೊಡೆದು ತರಲು ಕಳುಹಿಸುತ್ತಾರೆ. ಈಜುವುದರಲ್ಲಿ, ಗುರಿಯಲ್ಲಿ, ಓಟದಲ್ಲಿ, ಗುಡಿಸಲು ಕಟ್ಟುವುದರಲ್ಲಿ ಸ್ಪರ್ಧೆ ಜರುಗಿಸುತ್ತಾರೆ. ಸ್ಪರ್ಧೆಯ ಫಲಿತಾಂಶವನ್ನು ಜಾತಿಯವರೆಲ್ಲಾ ಕೂಡಿಕೊಂಡು ನಿರ್ಣಯಿಸುತ್ತಾರೆ. ಕೆಲವರನ್ನು ದೊಡ್ಡವರೊಂದಿಗೆ ಸೇರಿಸುತ್ತಾರೆ. ಕೆಲವರಿಗೆ ಇನ್ನೊಂದು ವರ್ಷ ಶಿಕ್ಷಣ ಪಡೆಯಬೇಕೆನ್ನುತ್ತಾರೆ. ಗೆದ್ದವರ ಗಲ್ಲಗಳಮೇಲೆ ಮಾಂತ್ರಿಕನು ವಲಯ ಮುದ್ರೆಗಳನ್ನು ಸುಡುತ್ತಾನೆ. ಆಗ ನೋವಾದರೂ ದೊಡ್ಡವನಾಗಲಿಚ್ಛಿಸುವವನು ಅಳಬಾರದು. ತರುವಾಯ ಮಾಂತ್ರಿಕನು ಸುಟ್ಟ ವಲಯುಗಳಿಗೆ ಬಣ್ಣ ಹಚ್ಚುವನು. ಆ ಬಣ್ಣ ಎಂದಿಗೂ ಅಳಿಯುವುದಿಲ್ಲ. (ಇನ್ನೂ ಇದೆ)



# ಲೆಕ್ಕ - ಚಮತ್ಕಾರ

1. ನಿನ್ನಿಷ್ಟಬಂದ ಸಂಖ್ಯೆ, ಎಷ್ಟು ಸಂಖ್ಯೆಯುಳ್ಳದಾದರೂ ಸರಿ, ಕೋರಿಕೊ. ಕಡೆಯ ಅಂಕೆ ಸೊನ್ನೆಯಾಗಿರಬಾರದು. ಆ ಸಂಖ್ಯೆಗಳ ಅಂಕೆಗಳನ್ನೆಲ್ಲಾ ಕೂಡಿಸಿ ಬಂದ ಮೊತ್ತದಿಂದ ಕೋರಿಕೊಂಡುದನ್ನು ಕಳೆ. ಕಳೆದಮೇಲೆ ಉಳಿದ ಸಂಖ್ಯೆಗಳ ಅಂಕೆಗಳಲ್ಲಿ ನಿನ್ನಿಷ್ಟಬಂದುದನ್ನು ಹೊಡೆ. ಮಿಕ್ಕ ಅಂಕೆಗಳನ್ನು ನಿನ್ನಿಷ್ಟಬಂದ ಕ್ರಮದಲ್ಲಿ ನನಗೆ ಹೇಳು. ನೀನು ಹೊಡೆದ ಸಂಖ್ಯೆ ನಾನು ಹೇಳುತ್ತೇನೆ.

ಉದಾಹರಣೆ: ನೀನು ಕೋರಿದ ಸಂಖ್ಯೆ 57,963 ಅಂದುಕೊಳ್ಳುವ- ಆ ಸಂಖ್ಯೆಯೊಳಗಿನ ಅಂಕೆಗಳನ್ನು ಕೂಡಿಸಿದರೆ 30 ಆಗುತ್ತದೆ. ಮೇಲಿನ ಸಂಖ್ಯೆಯಿಂದ 30 ನ್ನು ಕಳೆದರೆ ಉಳಿದುದು 57,933. ಇದರಲ್ಲಿ ಒಂದು ಮೂರನ್ನು ಹೊಡೆದು ಹಾಕುವ. ಮಿಕ್ಕ ಅಂಕೆಗಳನ್ನು ಯಾವುದೋ ಒಂದು ಕ್ರಮದಿಂದ 3,7,5,9, ಎಂದು ಹೇಳುತ್ತಲೇ ಹೊಡೆದ ಸಂಖ್ಯೆ 3 ಎಂದು ಗೊತ್ತಾಗಿಬಿಡುತ್ತೆ.

ಇದು ಹೇಗೆ? ನಾವು ಒಂದು ವಿಷಯ ಗುರುತಿಸಿರಬೇಕು. ಉಳಿದ ಸಂಖ್ಯೆಗಳ ಅಂಕೆಗಳನ್ನು ಕೂಡಿಸಿದರೆ ಬರುವ ಮೊತ್ತವು 9 ರಿಂದ ಶೇಷವಿಲ್ಲದೆ ಭಾಗಿಸುವಂತಿರುತ್ತದೆ. ನಾವು ಉದಾಹರಣೆಗೆ ತೆಗೆದುಕೊಂಡ 5,7,9,3,3 ಕಲಸಿ ಕೂಡಿಸಿದರೆ 27 (ಮೂರು ಒಂಬತ್ತುಗಳು) ಆಗುತ್ತದೆ. ಹೊಡೆದುಹಾಕಿ, ಉಳಿದ ಅಂಕೆಗಳು (3,7,5,9) ಕೂಡಿದಾಗ 24 ಮಾತ್ರ ಬರುತ್ತದಷ್ಟೆ? ಇದಕ್ಕೆ ಯಾವ ಅಂಕೆ ಕೂಡಿಸಿದರೆ 9 ರಿಂದ ಶೇಷವಿಲ್ಲದಂತೆ ಭಾಗಿಸಲಾಗುತ್ತದೆ? 3 ತಾನೆ? ಅದೇ ಹೊಡೆದ ಅಂಕೆ.

2. ಮೇಲಿನ ಚಮತ್ಕಾರವನ್ನು ಇನ್ನೊಂದು ವಿಧವಾಗಿಯೂ ಮಾಡಬಹುದು. ಯಾವುದೋ ಒಂದು ಸಂಖ್ಯೆ ತೆಕ್ಕೊಳ್ಳಿ. ಅದರ ಅಂಕೆಗಳನ್ನು ತಾರುಮಾರು ಮಾಡಿ ಇನ್ನೊಂದು ಸಂಖ್ಯೆ ತಯಾರಿಸಿರಿ. ಬಳಿಕ ಒಂದರೊಳಗಿನಿಂದ ಇನ್ನೊಂದನ್ನು ಕಳೆದು ಬರುವ ಸಂಖ್ಯೆಯಿಂದ ಒಂದು ಅಂಕೆಯನ್ನು ಹೊಡೆದು ಉಳಿದ ಅಂಕೆಗಳನ್ನು ಹೇಳಿದರೆ, ಹೊಡೆದ ಅಂಕೆಯನ್ನು ಮೇಲಿನ ರೀತಿಯಲ್ಲಿಯೇ ತಟಕ್ಕನೆ ಹೇಳಬಹುದು.

ಈ ತಮಾಷೆಯನ್ನು ಇತರ ಅಂಕೆಗಳೊಂದಿಗೂ ಮಾಡಿ ನೋಡಿ.

# ನಾಗರಿಕತೆ

ಒಂದು ತೋಳಕ್ಕೆ ನಾಗರಿಕವಾಗಿ ಜೀವಿಸಬೇಕೆಂದು ಬುದ್ಧಿ ಬಂತು. ಅದೊಂದು ನಾಯಿಯೊಡನೆ ಸ್ನೇಹಮಾಡಿಕೊಂಡಿತು. ನಾಯಿಯನ್ನು ಅನೇಕ ಊರಿನ ಪ್ರಾಣಿಗಳು ಮಾತಾಡಿಸುವುದನ್ನು ಅದು ನೋಡಿತು. ಹಾಗೇ ಒಂದು ಹುಲ್ಲುಗಾವಲಿನ ಬಳಿಗೆ ಬಂದಾಗ, ಅಲ್ಲೊಂದು ಟಗರು ಮೇಯುತಿತ್ತು.

ತೋಳಕ್ಕೆ ಭಾರೀ ಹಸಿವೆ. ಅದು ನಾಯಿಯಕಡೆಗೆ ತಿರುಗಿ "ಈ ಟಗರನ್ನು ಏನು ಮಾಡೋಣ ನಾಯೀ?" ಎಂದು ಕೇಳಿತು.

"ನಿನ್ನಿಷ್ಟ ತೋಳಣ್ಣ" ಎಂದಿತು ನಾಯಿ.

ತೋಳವು ಟಗರಿನಬಳಿಗೆ ಹೋಗಿ "ಓ ಟಗರೆ, ನೀನು ನೆಲದಲ್ಲಿ ಮಲಗು ನೋಡುವಾ!" ಅಂದಿತು. "ಏಕೆ?" ಎಂದು ಕೇಳಿತು ಟಗರು.

"ನಿನ್ನನ್ನು ಕೊಂದು ತಿನ್ನಬೇಕು" ಎಂದಿತು ತೋಳ.

"ಇಷ್ಟೇನೆ? ಅದಕ್ಕೇಕೆ ಅಷ್ಟು ಕಷ್ಟ? ನೀನು ಬಾಯಿ ತೆರೆದು ನಿಲ್ಲು. ನಾನು ಓಡಿಬಂದು ನಿನ್ನ ಬಾಯಿಯೊಳಗೆ ತೂರಿಬಿಡುತ್ತೇನೆ" ಎಂದು ಟಗರು ಹಿಂದೆ ಹಿಂದೆ ಹೋಯಿತು. ತೋಳವು ಬಾಯಿ ತೆರೆದು ನಿಂತಿತು. ಟಗರು ರಭಸದಿಂದೋಡಿಬಂದು ತೋಳದ ಮೂತೀಮೇಲೆ ಬಲವಾಗಿ ತಾಡಿತು. ಆ ಏಟಿಗೆ ಸ್ಮೃಹೆತಪ್ಪಿ ಬಿದ್ದುಹೋದ ತೋಳವು, ಮತ್ತೆ ಸ್ಮೃಹೆತಿಳಿದು ಎದ್ದಮೇಲೆ, ನಾಗರಿಕತೆಗೊಂದು ಗೊಡ್ಡುನಮಸ್ಕಾರ ಹಾಕಿ ಕಾಡಿನೊಳಗೆ ಹೋಯಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1959 ಫಿಬ್ರವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಡಿಸೆಂಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಆಧಾರದಿಂದ

ಎರಡನೇ ಫೋಟೋ: ಅಭ್ಯಾಸದಿಂದ

ಕಳಿಸಿದವರು: ಶ್ರೀಮತಿ ಲಕ್ಷ್ಮಿ,

ರೂರಲ್ ಎಲಿಮೆಂಟರೀ ಸ್ಕೂಲಿನ ಹತ್ತಿರ, ಮಂಗಳೂರು - 3.

**ಬಹುಮಾನ ರೂ. 10/- ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಚಿ ತ್ರ ಕ ಥೆ





ಒಂದುದಿನ ವಾಸು ಮತ್ತು ಗೋಪಿಯರು 'ಟೈಗರಿ' ನೊಂದಿಗೆ ತೋಟದಲ್ಲಿ ನಡೆದಾಡುತ್ತಿದ್ದರು. ಆಗೊಂದು ಪೊದರಿನೆಡೆಯಿಂದ ವಿಕಾರವಾದ ಕೂಗು ಕೇಳಿಸತೊಡಗಿತು. ಯಾವುದೋ ದುಷ್ಟ ಮೃಗದ ಧ್ವನಿಯೆಂದುಕೊಂಡು ಗೆಳೆಯರಿಬ್ಬರೂ ಭಯಪಟ್ಟರು. ಆದರೆ ಧೀರ 'ಟೈಗರ್' ಆ ಶಬ್ದ ಬರುವ ಪೊದೆಯಮೇಲೆ ಧುಮುಕಿತು. ಘಣಾರೆಂದಿತು. ಶಬ್ದ ಹೊರಡಿಸುತ್ತಿದ್ದ ಕಹಳೆಯೊಂದು ಕೆಳಕ್ಕೆ ಬಿತ್ತು. ಅದನ್ನು ಊದುತ್ತ ವಿಕಾರಶಬ್ದ ಹೊರಡಿಸುತ್ತಿದ್ದ ಪೋಕರಿಹುಡುಗನೊಬ್ಬ ಹೆದರಿ ಹಾರಿ ಓಡಿಯೇ ಹೋಗಿಬಿಟ್ಟ! ಅವನ ಕಹಳೆ ನಮ್ಮವರಿಗೆ ಸಿಕ್ಕಿತು.






Printed by B. NAGI REDDI at the B. N. K. Press Private Ltd., and Published by B. VENUGOPAL REDDI for Sarada Binding Works, 2 & 3 Arcot Road, Madras-26. Controlling Editor: 'CHAKRAPANI'

BY 100

# ಬಿನ್ನಿಯವರ ಕಾಟ್ಸ್‌ವಾಲ್

## ನಿಮ್ಮ ಚರ್ಮಕ್ಕೆ ಯಾವಾಗಲೂ ಹಾಯಾಗಿರುವ ಅದ್ಭುತ ಬಟ್ಟೆ!



"ಮೃದುವಾದ ಕಾಟ್ಸ್‌ವಾಲ್ ಹಾಕಿ
ಕೊಂಡಿರುವುದರಿಂದ ಎಷ್ಟು ಬೆಚ್ಚಗೆ
ಹಾಯಾಗಿದ್ದೀರಿ, ಕಂದಮ್ಮಗಳಿರ!"



**ಕಾಟ್ಸ್‌ವಾಲ್ ಕೊಳ್ಳುವುದು ತುಂಬ ಆದಾಯಕರ, ಏಕೆಂದರೆ...**

ಇದು ನಿಯಂತ್ರಿತ ರೀತಿಯಲ್ಲಿ ತಯಾರಾದ ಉತ್ತಮವಾದ ಉಣ್ಣೆ ಮತ್ತು ಹತ್ತಿ ಇವೆರಡರ ವೈಜ್ಞಾನಿಕ ಮಿಶ್ರಣದಿಂದ ತಯಾರಾಗುತ್ತದೆ.

ಇದು ದೀರ್ಘ ಕಾಲ ಬಾಳಿಕೆ ಬರುತ್ತದಲ್ಲದೆ ಯಾವಾಗಲೂ ಮೃದುವಾಗಿರುತ್ತದೆ.

ಇದು ಎಂತಹ ಕೋಮಲವಾದ ಚರ್ಮವನ್ನಾದರೂ ಚುಚ್ಚುವುದಿಲ್ಲವಾದುದರಿಂದ ಮಕ್ಕಳಿಗೆ ಆದರ್ಶವಾದುದು.

ಇದು ನೋಡುವುದಕ್ಕೆ ಅಂದವಾಗಿರುತ್ತದೆ ಮತ್ತು ಇದನ್ನು ಯಾವ ಕಾಲದಲ್ಲಿಯಾದರೂ ಹಾಕಿಕೊಳ್ಳಬಹುದು.

ಕಾಟ್ಸ್‌ವಾಲ್ ಕುಗ್ಗುವುದಿಲ್ಲವೆಂಬುವುದರ ಬಗ್ಗೆ ಗ್ಯಾರಂಟಿ ಇದೆ.

ಕಾಟ್ಸ್‌ವಾಲನ್ನು ಮನೆಯಲ್ಲಿ ಕೂಡಾ ಒಗೆಯಬಹುದು. ಇದು ಅನೇಕ ಬಣ್ಣಗಳಲ್ಲಿಯೂ, ಪ್ರಿಂಟುಗಳಲ್ಲಿಯೂ, ಚೆಕ್ ಮಾದರಿ ಮತ್ತು ಪಟ್ಟೆಪಟ್ಟೆಯ ಬಟ್ಟೆಗಳಲ್ಲಿಯೂ ಬರುತ್ತದೆ.

**ಕಾಟ್ಸ್‌ವಾಲ್ ಬಟ್ಟೆಗೆ ಸಾಟಿ ಇಲ್ಲ!**




ಉಚಿತವಾಗಿ ಸಿಕ್ಕುವ ನಮೂನೆಯ ಫೋಲ್ಡರುಗಳಿಗೆ ನಿಮ್ಮ ಕಾಟ್ಸ್‌ವಾಲ್ ಡೀಲರನ್ನು ಕೇಳಿರಿ.

ವಿಶೇಷ ಬೆಚ್ಚಗಿರಬೇಕಾದರೆ ಬಿನ್ನಿಯವರ ಅಂಗೋಲಾ ಉಪಯೋಗಿಸಿರಿ.

ದಿ ಬೆಂಗಳೂರು ಉಲ್ಲನ್, ಕಾಟನ್ ಅಂಡ್ ಸಿಲ್ಕ್ ಮಿಲ್ಸ್ ಕಂಪೆನಿ ಲಿಮಿಟೆಡ್
ಮ್ಯಾನೇಜಿಂಗ್ ಏಜೆಂಟರು: ಬಿನ್ನಿ ಅಂಡ್ ಕಂಪೆನಿ (ಮದರಾಸು) ಲಿಮಿಟೆಡ್

Photo by P. R. Shinde



ಬಹುಮಾನ
ಪಡೆದ ಶೀರ್ಷಿಕೆ

ಅಭ್ಯಾಸದಿಂದ

ಕಳುಹಿಸಿದವರು :
ಶ್ರೀಮತಿ ಲಕ್ಷ್ಮಿ

